# ಶ್ರೀ ಪ್ರಭಾಕರ ನೀರ್‌ಮಾರ್ಗ ಅವರ ಕಾದಂಬರಿಗಳಲ್ಲಿ ತುಳುವ ಸಂಸ್ಕೃತಿಯ ಪ್ರತಿನಿಧೀಕರಣ

ಕನ್ನಡ ವಿಶ್ವವಿದ್ಯಾನಿಲಯ, ಹಂಪಿ
ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

ಸಂಶೋಧಕ

**ಕಿಟ್ಟು .ಕೆ**

ಮಾರ್ಗದರ್ಶಕರು

**ಡಾ। ಪ್ರಭಾಕರ ಜೋಶಿ**

೨೦೧೦

...ಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು

# ಶ್ರೀ ಪ್ರಭಾಕರ ನೀರ್‌ಮಾರ್ಗರವರ ಕಾದಂಬರಿಗಳಲ್ಲಿ ತುಳುವ ಸಂಸ್ಕೃತಿಯ ಪ್ರತಿನಿಧೀಕರಣ



ಕನ್ನಡ ವಿಶ್ವವಿದ್ಯಾನಿಲಯ, ಹಂಪಿ

ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

ಸಂಶೋಧಕ

**ಕಿಟ್ಟು .ಕೆ**

ಮಾರ್ಗದರ್ಶಕರು

**ಡಾ। ಪ್ರಭಾಕರ ಜೋಶಿ**



೨೦೧೦

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು

# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಎಂ.ಫಿಲ್ ಪದವಿಗಾಗಿ ಸಾದರ ಪಡಿಸಿದ 'ಶ್ರೀ ಪ್ರಭಾಕರ ನೀರ್‌ಮಾರ್ಗರವರ ಕಾದಂಬರಿಗಳಲ್ಲಿ ತುಳುವ ಸಂಸ್ಕೃತಿಯ ಪ್ರತಿನಿಧೀಕರಣ' ಎಂಬ ಶೀರ್ಷಿಕೆಯ ಈ ಸಂಪ್ರಬಂಧವು ಈ ಸಂಶೋಧಕರ ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ **ಡಾ| ಪ್ರಭಾಕರ ಜೋಶಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮಾ, ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಇ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

**ಕಿಟ್ಟು ಕೆ.**

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು

# ಯೋಗ್ಯತಾ ಪತ್ರ

ಶ್ರೀ ಕಿಟ್ಟು .ಕೆ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ **'ಶ್ರೀ ಪ್ರಭಾಕರ ನೀರ್‌ಮಾರ್ಗರವರ ಕಾದಂಬರಿಗಳಲ್ಲಿ ತುಳುವ ಸಂಸ್ಕೃತಿಯ ಪ್ರತಿನಿಧೀಕರಣ'** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವು ಸಂಶೋಧಕನ ಸ್ವಂತ ಪರಿಶ್ರಮ, ಅಭಿಪ್ರಾಯ, ಸಂಗ್ರಹ, ಬೋಧನೆ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.

**ಡಾ. ಪ್ರಭಾಕರ ಜೋಶಿ**
ಸಂಶೋಧನಾ ಮಾರ್ಗದರ್ಶಕರು

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು

# ಶ್ರೀ ಪ್ರಭಾಕರ ನೀರ್‌ಮಾರ್ಗರವರ ಕಾದಂಬರಿಗಳಲ್ಲಿ ತುಳುವ ಸಂಸ್ಕೃತಿಯ ಪ್ರತಿನಿಧೀಕರಣ

## ಅನುಕ್ರಮಣಿಕೆ

****************

# ಅಧ್ಯಾಯ ೧

೧.೧ ಪ್ರಸ್ತಾವನೆ

೧.೨ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೩ ಅಧ್ಯಯನದ ಸ್ವರೂಪ

೧.೪ ಈವರೆಗಿನ ಅಧ್ಯಯನದ ಸಮೀಕ್ಷೆ

# ಅಧ್ಯಾಯ : ೧

## ೧.೧ ಪ್ರಸ್ತಾವನೆ

ದ್ರಾವಿಡ ಭಾಷೆಗಳಲ್ಲಿ ಮುಖ್ಯವಾದ ಒಂದು ಭಾಷೆ ತುಳು. ಇದಕ್ಕೆ ಸುಮಾರು ಎರಡುಸಾವಿರ ವರ್ಷಗಳಿಗೂ ಹಿಂದಿನ ಪರಂಪರೆ ಇರುವುದನ್ನು ಭಾಷಾ ವಿಜ್ಞಾನಿಗಳು ಗುರುತಿಸಿದ್ದಾರೆ. ಈ ಭಾಷೆಯು ಅದರದ್ದೇ ಆದ ಚಾರಿತ್ರಿಕ ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ, ಪ್ರಾದೇಶಿಕ, ವೈಶಿಷ್ಟ್ಯಗಳನ್ನು ಒಳಗೊಂಡಿದೆ. ತುಳುನಾಡಿನಲ್ಲಿ ಬೇರೆ ಬೇರೆ ಜಾತಿ ಧರ್ಮದ ಜನರಿದ್ದು, ಇವರೆಲ್ಲರೂ ಈ ಭಾಷೆಯನ್ನು ಸಾಮಾನ್ಯ ಭಾಷೆಯಾಗಿ ಬಳಸುತ್ತಾರೆ. ತುಳು ಭಾಷೆಯನ್ನಾಡುವ ಜನರನ್ನು ಗುರುತಿಸಿಕೊಂಡು ತುಳುನಾಡಿನ ಸೀಮೆಯನ್ನು ಹೇಳುವುದಾದರೆ ಉಡುಪಿಯ ಬಾರಕೂರಿನಿಂದ ಕಾಸರಗೋಡಿನವರೆಗೆ ತುಳುವಿನ ಭೌಗೋಳಿಕ ವ್ಯಾಪ್ತಿಯಿದೆ. ಅನಾದಿಕಾಲದಿಂದಲೂ ತುಳುನಾಡಿನ ಎಲ್ಲೆಯನ್ನು ಗೋಕರ್ಣದಿಂದ ಚಂದ್ರಗಿರಿಯವರೆಗೆ ಗುರುತಿಸುವುದು ಕಂಡು ಬರುತ್ತದೆ. ತುಳುದೈವಗಳ ನುಡಿಗಟ್ಟುಗಳಲ್ಲಿ ಬರುವ ಬಡಕಾಯಿ ಅಂಕೋಲೆಡ್ದ್ ತೆಂಕಾಯಿ ನೀಲೇಶ್ವರ ಮುಟ್ಟ (ಬಡಗು ಅಂಕೋಲೆಯಿಂದ ತೆಂಕಾಯಿ ನೀಲೇಶ್ವರದ ವರೆಗೆ) ಎಂಬ ಹೇಳಿಕೆ ಗಮನಾರ್ಹವಾಗಿದೆ. (ಪ್ರೊ. ಕೇಶವ ಉಚ್ಚಿಲ : ತುಳು ಸಂಸ್ಕೃತಿಯ ವೈದಿಕೀಕರಣ; ೨೦೦೬, ೫೭) ಅವಿಭಜಿತ ದಕ್ಷಿಣಕನ್ನಡ ಅಥವಾ ತುಳು ನಾಡೆಂದೇ ಪ್ರಖ್ಯಾತವಾದ ಕರ್ನಾಟಕ ಕರಾವಳಿಯಲ್ಲಿ ತುಳು ವ್ಯಾವಹಾರಿಕ ಭಾಷೆಯಾಗಿ ಪ್ರಾಚೀನ ಕಾಲದಿಂದಲೂ ಇರುವಂತಹ ವಿಚಾರ ಕೆಲವು ಪ್ರಾಚೀನ ಶಾಸನ ಮತ್ತು ಕೃತಿಗಳಲ್ಲಿ ಕಂಡು ಬರುತ್ತದೆ. ಆದ್ದರಿಂದ ತುಳುನಾಡಿಗೆ ಅದರದೇ ಆದ ಐತಿಹಾಸಿಕ ಮಹತ್ವ ಇರುವುದು ಸ್ಪಷ್ಟ. ಬೆಟ್ಟ, ಗುಡ್ಡ, ನದಿ, ಕಣಿವೆ, ಬಯಲುಗಳಿಂದ ಒಡಗೂಡಿ ಮೆರೆಯುತ್ತಿರುವ ತುಳುನಾಡು ಪ್ರಾಕೃತಿಕವಾಗಿ ತನ್ನ ಸೌಂದರ್ಯವನ್ನು ಉಳಿಸಿಕೊಂಡು ಜನರ ಕಣ್ಮನಗಳನ್ನು ಸೆಳೆಯುತ್ತದೆ. ತುಳುನಾಡಿನ ಸೌಂದರ್ಯ, ಆಕಾರ, ಸ್ವರೂಪ, ಸಮೃದ್ಧಿಗಳನ್ನು ಧ್ವನಿಸುವ ವಿವರಗಳನ್ನು ಪಂಜುರ್ಲಿ ಪಾಡ್ದನ ದಲ್ಲಿ ನೋಡಬಹುದು.

ಕೆಳಗೆ ತುಳುವ ರಾಜ್ಯ ನೋಡಿದಾಗ<br>
ತುಂಬಾ ಚಂದ ಕಂಡಿತು<br>
ಸತ್ತಿಗೆಯಷ್ಟು ದೊಡ್ಡದು<br>
ಹರಿವಾಣದಷ್ಟು ಉರುಟು

ಪಾವಲಿಯಂತೆ ಸುಂದರ
ಕೆಳಗೆ ತುಳುವ ರಾಜ್ಯಕ್ಕೆ ನಾನು ಇಳಿಯುತ್ತೇನೆ.
(ಡಾ.ಬಿ.ಎ.ವಿವೇಕ ರೈ(ಸಂ): ತುಳು ಸಾಹಿತ್ಯ ಚರಿತ್ರೆ; ೨೦೦೭)

ಇಲ್ಲಿ ಬರುವ ಸತ್ತಿಗೆ, ಹರಿವಾಣ , ಪಾವಲಿ ಇವು ತುಳುವರ ಸಾಂಸ್ಕೃತಿಕ ಬದುಕಿನಲ್ಲಿ ಮಹತ್ವದ ಸ್ಥಾನವನ್ನು ಪಡೆದಿದೆ. ಇಂತಹ ಸಮೃದ್ಧ ಪ್ರಾಕೃತಿಕ, ಸಾಂಸ್ಕೃತಿಕ ಸಂಪತ್ತನ್ನು ಬಳಸಿಕೊಂಡು ಈ ವರೆಗೆ ಸಾವಿರಾರು ಸಾಹಿತ್ಯ ಕೃತಿಗಳು ರಚನೆಯಾಗಿವೆ. ಜಾನಪದ ಹಾಗೂ ಆಧುನಿಕ ಸಾಹಿತ್ಯಗಳೆರಡರಲ್ಲೂ ತುಳುನಾಡಿನ ಸಂಸ್ಕೃತಿ ಸಾಕಷ್ಟುವ್ಯಕ್ತವಾಗಿದೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಾದಂಬರಿಯು ಬಹಳ ಜನಪ್ರಿಯವಾದ ಸಾಹಿತ್ಯ ಪ್ರಕಾರ. ಈ ಸಾಹಿತ್ಯ ಪ್ರಕಾರ ಒಂದು ರೀತಿಯಿಂದ ಜಾನಪದ ಸಾಹಿತ್ಯದಂತೆ ಸಾಮಾನ್ಯ ಜನರ ಆಶೋತ್ತರಗಳನ್ನು, ಅಭಿರುಚಿಗಳನ್ನು, ಸಂಸ್ಕೃತಿಯ ಮಟ್ಟವನ್ನು ವಿವರವಾಗಿ ಪ್ರತಿಬಿಂಬಿಸುವ ಮಾಧ್ಯಮವಾಗಿದೆ. ಒಬ್ಬ ಬರಹಗಾರನ ವಿಸ್ತಾರವಾದ ಅನುಭವವನ್ನು ವ್ಯಾಪಕವಾಗಿ ತೆರೆದಿಡಬಲ್ಲ ಮಾಧ್ಯಮವು ಕಾದಂಬರಿ. ಹೊಸಗನ್ನಡ ಸಾಹಿತ್ಯದ ಬೇರೆ ಬೇರೆ ಘಟ್ಟಗಳಲ್ಲಿ ಮೂಡಿಬಂದ ಕಾದಂಬರಿಗಳಲ್ಲಿ ತತ್ಕಾಲೀನ ಸಮಸ್ಯೆಗಳನ್ನು ಇಟ್ಟುಕೊಂಡು, ಕಾದಂಬರಿಕಾರನೊಬ್ಬ ತನ್ನ ಮನದ ಸೃಜ ಭಾವನೆಗಳನ್ನು ಪ್ರಕಟಪಡಿಸಿರುವುದು ಕಂಡುಬರುವುದು.

ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ದಕ್ಷಿಣಕನ್ನಡದ ಬರಹಗಾರರು ತೊಡಗಿಸಿಕೊಂಡಿದ್ದಾರೆ. ಅದೇ ರೀತಿ ಕಾದಂಬರಿ ಕ್ಷೇತ್ರದಲ್ಲೂ ಗುಲ್ವಾಡಿ ವೆಂಕಟರಾಯರಿಂದ ಹಿಡಿದು ಡಾ। ಎಚ್. ನಾಗವೇಣಿಯವರ ಬರೆಹದವರೆಗಿನ ವಿಚಾರಗಳನ್ನು ವಿಶ್ಲೇಷಿಸುವಾಗ ಚಾರಿತ್ರಿಕ, ಸಾಂಸ್ಕೃತಿಕ, ಸಾಮಾಜಿಕ, ಪ್ರಾದೇಶಿಕವಾದ ವಿವರಗಳನ್ನು ಒಳಗೊಂಡ ಅನೇಕ ಕಾದಂಬರಿಗಳು ಕನ್ನಡದಲ್ಲಿ ಪ್ರಕಟವಾಗಿವೆ. ಇವುಗಳಲ್ಲೂ ವಿಶೇಷವಾಗಿ ಡಾ। ಎಚ್. ನಾಗವೇಣಿ ಅವರ ಕೃತಿಗಳು ತುಳು ಸಂಸ್ಕೃತಿ ಮತ್ತು ಇಲ್ಲಿನ ಪ್ರಾದೇಶಿಕತೆಯನ್ನು ಬಿಂಬಿಸುತ್ತವೆ. ಲೇಖಕಿಯ ಬಾಲ್ಯದ ಬಗೆಗಿನ ನೆನಪುಗಳು, ಮರೆಯಾಗುತ್ತಿರುವ ಸಮೃದ್ಧ ಸಾಂಸ್ಕೃತಿಕ ಲೋಕ, ನವನಾಗರೀಕತೆಯ ಆಗಮನ ಇದರಿಂದಾಗಿ ಮರೆಯಾಗುತ್ತಿರುವ ತುಳುನಾಡಿನ ಹಬ್ಬ ಹರಿದಿನಗಳ ಆಚರಣೆ- ಹೀಗೆ ಕಡಲ ತಡಿಯ ಜನಜೀವನದ ಸ್ಥಿತಿಗತಿಗಳನ್ನು, ತುಳುನಾಡಿನ ಸಾಂಸ್ಕೃತಿಕ ಬದುಕಿನ ದಟ್ಟ ಅನುಭವವನ್ನು ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ.

ಪ್ರಾದೇಶಿಕತೆಯನ್ನೇ ಪ್ರಧಾನವಾದ ಅಂಶವನ್ನಾಗಿರಿಸಿಕೊಂಡು ಕಾದಂಬರಿಗಳನ್ನು ರಚಿಸಿದವರಲ್ಲಿ ಶ್ರೀ ಪ್ರಭಾಕರ ನೀರುಮಾರ್ಗ ಅವರು ಒಬ್ಬರಾಗಿದ್ದಾರೆ. ಗ್ರಾಮಿಣ ಸಂಸ್ಕೃತಿಯ ವಿವಿಧ ಮುಖಗಳನ್ನು ಪರಿಚಯಿಸುವ ಇವರ ಕಾದಂಬರಿಗಳು ತುಳುವರು ಬದುಕಿದ ರೀತಿ, ಜೀವನ ಮೌಲ್ಯ, ನಂಬಿಕೆ, ನಡವಳಿಕೆ, ರಂಗುರಸಿಕತೆ, ಕಲಾಪ್ರಜ್ಞೆ, ಜಾತಿ ವೈಷಮ್ಯ,

ಶೋಷಣೆ ಇವುಗಳನ್ನು ದಾಖಲಿಸುವ ಪ್ರಯತ್ನ ನಡೆದಿದೆ. ಪ್ರಾಕೃತಿಕ ಸೌಂದರ್ಯದ ನೆಲೆಯಾದ ತುಳುನಾಡಿನ ಸ್ವರೂಪದ ವಿವರಣೆ ಇಲ್ಲಿ ಪ್ರಕಟಗೊಳ್ಳುತ್ತದೆ.

ವ್ಯಕ್ತಿ, ಸಮಾಜ, ಸಂಸ್ಕೃತಿಯ ಒಳಗಡೆ ಕಾದಂಬರಿಯ ವಸ್ತುವಿಚಾರಗಳು ಪ್ರಕಟವಾಗುತ್ತಾ ತುಳು ಸಂಸ್ಕೃತಿಯನ್ನು ವಿಶಿಷ್ಟ ರೀತಿಯಲ್ಲಿ ಸ್ಪಷ್ಟೀಕರಿಸುತ್ತದೆ. ತುಳುನಾಡಿನಲ್ಲಿ ಆರಾಧನೆಗೊಳ್ಳುವ ಬೇರೆ ಬೇರೆ ದೇವರು, ದೈವಗಳ ಕುರಿತ ವಿವರಣೆ, ಜಾತಿವರ್ಗದ ಜನರ ಉಲ್ಲೇಖಗಳು, ಅವರ ಕೆಲಸದ ವಿವರಗಳು ಇಲ್ಲಿ ಚಿತ್ರಿತಗೊಂಡಿವೆ. ಪ್ರಗತಿಪರವಾದ ಆಶಯವನ್ನೇ ಇಟ್ಟುಕೊಂಡು ಇವರ ಎಲ್ಲಾ ಕಾದಂಬರಿಗಳು ರಚನೆಯಾಗಿವೆ. ಬೇರೆ ಬೇರೆ ಆರಾಧನೆಗಳ ಬಗ್ಗೆ ಜನರಿಗೆ ಇರುವ ಭಯ ಭಕ್ತಿ, ವಿಶ್ವಾಸಗಳು ಇಲ್ಲಿ ವ್ಯಕ್ತವಾಗುತ್ತವೆ. ಒಂದು ಪ್ರಾದೇಶಿಕ ಸಂಸ್ಕೃತಿಯ ಅರಿವನ್ನು ಇಂದಿನ ಜನಾಂಗದಲ್ಲಿ ಮೂಡಿಸುವ, ಸಂಸ್ಕೃತಿಯನ್ನು ಸಂರಕ್ಷಿಸುವ, ಆ ಮೂಲಕ ಅದ್ಭುತವಾದ ತುಳು ಸಂಸ್ಕೃತಿಯು ಮುಂದಿನ ದಿನಗಳಲ್ಲೂ ಚಲನಶೀಲವಾಗುವಂತೆ ಎಚ್ಚರಿಸುವ ಪ್ರಯತ್ನ ಇಲ್ಲಿ ನಡೆದಿದೆ. ಒಟ್ಟು ಜಾಗತೀಕರಣದ ಪ್ರಸ್ತುತ ಸಂದರ್ಭದಲ್ಲಿ ನೀರ್‌ಮಾರ್ಗರವರ ಕಾದಂಬರಿಗಳಲ್ಲಿ ಬರುವ ವಿಚಾರ ಮುಖ್ಯವಾಗುತ್ತದೆ. ತುಳುನಾಡಿನಲ್ಲಿ ಲೇಖಕರು ಕೇಳಿದ್ದನ್ನು, ಕಂಡದ್ದನ್ನು ಅನುಭವಿಸಿದ್ದನ್ನು, ದಾಖಲಿಸುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಿದ್ದಾರೆ.

### ತುಳು ಸಂಸ್ಕೃತಿ ಎಂದರೇನು?

ಇಂಗ್ಲೀಷಿನಲ್ಲಿ 'culture' ಎಂಬ ಪದಕ್ಕೆ ಸಂವಾದಿಯಾಗಿ ಬಳಸುವ 'ಸಂಸ್ಕೃತಿ' ಎಂಬ ಪದವು ಬಹು ಮುಖ್ಯವಾದ ಅರ್ಥವನ್ನು ಪಡೆದು ಬೆಳೆಯುತ್ತಾ ಬಂದಿದೆ. ಮಾನವ ಸಮುದಾಯದ ಸಂಪ್ರದಾಯಗಳಿಂದ ಹಿಡಿದು, ವೈಯಕ್ತಿಕವಾದ ಆಚರಣೆಗಳವರೆಗೂ ಇದರ ವ್ಯಾಪ್ತಿಯಿದೆ. 'ಸಂಸ್ಕೃತಿ' ಸೂತ್ರ ರೂಪದಲ್ಲಿ ಹಿಡಿದಿಡಲಾಗದ ವಿರಾಟ್‌ಶಕ್ತಿ. "ಸೌಂದರ್ಯೋಪಾಸನೆಯೇ ಸಂಸ್ಕೃತಿ" ಎಂಬ ಮಾತು ಪ್ರಸ್ತುತ ಸನ್ನಿವೇಶದಲ್ಲಿ ಹೆಚ್ಚು ಸೂಕ್ತ ಎನಿಸುತ್ತಿದೆ. ಸಮ್ಯಕ್+ಕೃತಿ ಎಂದು ಈ ಶಬ್ದವನ್ನು ನಿಷ್ಪನ್ನಗೊಳಿಸಿ ಅರ್ಥೈಸಿದಾಗ, ಉತ್ತಮವಾದ ಕಾರ್ಯದಿಂದ ರೂಪಿತವಾದ ಎಂಬ ಅರ್ಥವನ್ನು ಕಂಡುಕೊಳ್ಳಬಹುದು. ಸಂಸ್ಕೃತಿ ಬದುಕಿನಿಂದ ಭಿನ್ನವಾದ ಒಂದು ಚಟುವಟಿಕೆಗಳ ಮೊತ್ತವಲ್ಲ. ಬದುಕನ್ನು ಇನ್ನಷ್ಟು ಸ್ಪಷ್ಟಗೊಳಿಸುವ ಪ್ರಕ್ರಿಯೆ. ಅದು ಬದುಕಿನ ಪರಿಣಾಮವೂ ಹೌದು. ಬದುಕಿಗೆ ಸಾಧನವೂ ಹೌದು. ಇಲ್ಲಿ ಒಂದು ಪ್ರದೇಶದಲ್ಲಿ ಬೆಳೆದುಬಂದ ಆಚಾರ, ವಿಚಾರ, ನಡೆನುಡಿ, ನಂಬಿಕೆ ಪದ್ಧತಿ, ಸಂಬಂಧ, ಮತ್ತು ಸಂಘರ್ಷ ಇರುತ್ತದೆ. ಸಂಸ್ಕೃತಿಯೊಂದು ಸಾಮಾಜಿಕ ಪರಂಪರೆಯೂ, ಜೀವನವನ್ನು ನಿರ್ವಹಿಸುವ ವಿಧಾನವೂ ಆಗಿದೆ. ಸರಳವಾದ ಅರ್ಥದಲ್ಲಿ ಹೇಳುವುದಾದರೆ ಸಂಸ್ಕೃತಿ ಎನ್ನುವುದು ಸಾಮಾಜಿಕ, ಭೌಗೋಳಿಕ, ಆರ್ಥಿಕ, ಧಾರ್ಮಿಕ, ವಾತಾವರಣಕ್ಕನುಗುಣವಾಗಿರುವ ಜೀವನ ವಿಧಾನ.

ನಂಬಿಕೆಗಳೂ ಸಂಸ್ಕೃತಿಯಾಗಬಹುದು; ಮೂಢನಂಬಿಕೆಗಳು ಸಂಸ್ಕೃತಿಯಾಗಬಹುದು, ಏಕೆಂದರೆ ಹಲವೊಮ್ಮೆ ಮೂಢನಂಬಿಕೆಗಳ ಹಿಂದೆಯೂ ಗೂಢವಾದ ಸತ್ಯಗಳಿರುತ್ತವೆ. ಮಾನವನ ನಿರ್ಧಿಷ್ಟ ಜೀವನ ರೀತಿಯ ಸೂಕ್ಷ್ಮ ಚಿತ್ರಗಳು ಇಲ್ಲಿ ಕಂಡುಬರುತ್ತದೆ. ಒಂದು ಜನಾಂಗದ ಜೀವಂತಿಕೆ ಇಲ್ಲಿರುತ್ತದೆ. ಜನರ ಬದುಕಿನ ರೀತಿ ರಿವಾಜುಗಳು, ಉಡುಗೆ-ತೊಡುಗೆ, ಆಹಾರ ಪದ್ಧತಿ, ಮನರಂಜನೆಯ ಪರಿಕರಗಳೆಲ್ಲವೂ ಇಲ್ಲಿ ಮೇಳೈಸಿರುತ್ತದೆ. ಒಂದು ಜನಾಂಗ ಸೃಷ್ಟಿಸಿಕೊಂಡಿರುವ ಸಾಮಾಜಿಕ ವ್ಯವಸ್ಥೆ, ಆಚರಣೆಗಳು, ನಂಬಿಕೆಗಳು, ಹಾಡು, ಕುಣಿತ, ಕಲೆ ಮುಂತಾದ ಮಾನಸಿಕ ಮತ್ತು ಬೌದ್ಧಿಕ ಸಾಧನೆಗಳನ್ನು ಸಂಸ್ಕೃತಿ ಒಳಗೊಳ್ಳುತ್ತದೆ. ಪ್ರಾದೇಶಿಕವಾಗಿ ಜನರನ್ನು ಒಗ್ಗೂಡಿಸುವ ಕ್ರಿಯೆಯೂ ಇಲ್ಲಿದೆ. ಒಂದು ವ್ಯಕ್ತಿಯ ಸಾಮಾಜಿಕ ಜೀವನದ ಭಾವನಾತ್ಮಕ ಸಂಬಂಧಗಳು ಮತ್ತು ಮೌಲ್ಯಗಳನ್ನು ಸಂಸ್ಕೃತಿ ಒಳಗೊಳ್ಳುತ್ತದೆ.

ಕರ್ನಾಟಕ ಸಾಂಸ್ಕೃತಿಕ ಅನನ್ಯತೆಯಲ್ಲಿ ತುಳುನಾಡಿನ ಕೊಡುಗೆ ಅತ್ಯಂತ ಮಹತ್ವದ್ದು. ದಕ್ಷಿಣಕನ್ನಡ ಜಿಲ್ಲೆಯು ಕರಾವಳಿ ತೀರದಲ್ಲಿದ್ದು ತನ್ನ ಭೌಗೋಳಿಕ ವೈಶಿಷ್ಟ್ಯಗಳಿಂದ ಸಾಂಸ್ಕೃತಿಕ ವೈವಿಧ್ಯವನ್ನು ಮೆರೆದಿದೆ. ತುಳುಭಾಷೆಯನ್ನಾಡುವ ಬಹುಸಂಖ್ಯಾತ ಜನರು ಇಲ್ಲಿದ್ದ ಕಾರಣದಿಂದ ಇದು ತುಳುನಾಡೆಂದು ಕರೆಸಿಕೊಂಡಿದೆ. ತುಳುನಾಡಿಗೆ ಅದರದ್ದೇ ಆದ ಪೌರಾಣಿಕ ಐತಿಹ್ಯವಿದೆ. ಹಿಂದೆ ಇದು ಪರಶುರಾಮನ ಕೊಡಲಿಯಿಂದ ಸೃಷ್ಟಿಯಾದ ನಾಡೆಂದೂ, 'ತುಳುವ', 'ತೌಳವ' ಎಂಬ ಹೆಸರುಗಳಿಂದಲೂ ಗುರುತಿಸಲ್ಪಡುತ್ತಿತ್ತು. ಹೀಗೆ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿರುವ ತುಳುನಾಡು ಬಹುವ್ಯಾಪ್ತಿಯ ಸಂಸ್ಕೃತಿಯನ್ನು ಒಳಗೊಂಡಿದೆ. ಸಮಾಜಕ್ಕೆ ಒಪ್ಪಿತವಾಗಿ ದೀರ್ಘಕಾಲ ಅಳವಡುವ, ಪ್ರಯೋಗದಲ್ಲಿ ಬಳಕೆಯಾಗುವ ವಿಚಾರಧಾರೆಗಳ ಸಮೂಹವೇ ಸಂಸ್ಕೃತಿ ಎನಿಸಿಕೊಳ್ಳುತ್ತದೆ. ತುಳುನಾಡ ಸಂಸ್ಕೃತಿಯನ್ನು ಅಭ್ಯಾಸ ಮಾಡಲು ಇದು ಸಹಕಾರಿಯಾಗಿದೆ. ಆಯಾ ಪ್ರದೇಶದ ಸಮಾಜ, ಜನರು ಬದುಕುತ್ತಿದ್ದ ರೀತಿ-ನೀತಿಗಳು, ಸಾಮಾಜಿಕ ಹಿನ್ನೆಲೆ, ಅರ್ಥವ್ಯವಸ್ಥೆ, ಕ್ರೀಡೆಗಳು, ವಾಸ್ತುಶಿಲ್ಪ, ಸಂಪತ್ತು, ಊಟ-ಉಪಚಾರ, ಕಸುಬು, ಆಚರಣೆಗಳು, ಧರ್ಮಗಳು, ರಾಜಕೀಯ ಕ್ಷೇತ್ರದ ಆಗುಹೋಗುಗಳು, ಆಡಳಿತಾಂಗಗಳು ಕಾರ್ಯನಿರ್ವಹಿಸುತ್ತಿದ್ದ ಪರಿ, ವೇಷಭೂಷಣ, ಉಡುಗೆತೊಡುಗೆಗಳು, ಹಬ್ಬಹರಿದಿನಗಳೆಲ್ಲ ನಮ್ಮ ಸಂಸ್ಕೃತಿಯ ಅಂಶಗಳು. (ಚಂದ್ರಹಾಸ್ ಚಾರ್ಮಾಡಿ: ತುಳುನಾಡ ಸಂಸ್ಕೃತಿ;೨೦೦೬,೨೮೧ ) ತುಳುನಾಡಿನಲ್ಲಿ ವಿವಿಧ ಜನಾಂಗಗಳಿದ್ದು, ಅವು ಸಂಸ್ಕೃತಿಯನ್ನು ಪ್ರತಿಬಿಂಬಿಸುವಲ್ಲಿ ಪ್ರಧಾನ ಅಂಗಗಳಾಗಿವೆ. ವಿವಿಧ ಜಾತಿ-ಉಪಜಾತಿಗಳ ಜನರು ತಮ್ಮದೇ ಆದ ರೀತಿ-ನೀತಿ ಕಸುಬುಗಳೊಂದಿಗೆ ಬದುಕುತ್ತಿದ್ದಾರೆ. ಇವೆಲ್ಲವು ಒಂದು ಪ್ರಾದೇಶಿಕ ಸಂಸ್ಕೃತಿಯನ್ನು ಪರಿಧಿಯೊಳಗಡೆ ಸೇರ್ಪಡೆಗೊಳ್ಳುತ್ತವೆ. ನಿರ್ಧಿಷ್ಟವಾದ ಭೌಗೋಳಿಕ ಪರಿಸರದಲ್ಲಿ ಇರುವ ಜೀವನ ಪದ್ಧತಿಯನ್ನು ಪ್ರಾದೇಶಿಕ ಸಂಸ್ಕೃತಿಯೆಂದು ಕರೆಯಬಹುದು.

## ೧.೨. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲೂಕಿನ ಸಾಮಾನ್ಯ ಹಳ್ಳಿಯೊಂದರಲ್ಲಿ ಹುಟ್ಟಿಬೆಳೆದವನು ನಾನು. ಬಾಲ್ಯದಿಂದಲೂ ತುಳುನಾಡಿನ ಜಾನಪದ ವಿಚಾರಗಳಲ್ಲಿ ಹೆಚ್ಚು

ಕುತೂಹಲ ಮತ್ತು ಆಸಕ್ತಿ, ಹಾಗಾಗಿ ತುಳು ಸಂಸ್ಕೃತಿಗೆ ಸಂಬಂಧಪಟ್ಟ ಆಚರಣೆಗಳಲ್ಲಿ, ಆರಾಧನೆಗಳಲ್ಲಿ ಭಾಗವಹಿಸುತ್ತಿದ್ದೆ. ಬೇಸಾಯದ ಸಂದರ್ಭದಲ್ಲಿ ಹಾಡುತ್ತಿದ್ದ ಓಬೇಲೆ, ಸಂಧಿ, ಪಾಡ್ದನಗಳನ್ನು ಆಲಿಸುತ್ತಿದ್ದೆ. ಹಾಗೆಯೇ ಇದಕ್ಕೆ ಸಂಬಂಧಪಟ್ಟ ಬರಹಗಳು, ವಿಚಾರಗಳು ಸಿಕ್ಕಿದಾಗಲೆಲ್ಲಾ ಅದನ್ನು ಸಂಗ್ರಹಿಸಿ, ಓದಿಕೊಳ್ಳುತ್ತಾ ಬಂದ ಹಾಗೆ ಅವುಗಳ ಬಗ್ಗೆ ಅಭಿರುಚಿ ಬೆಳೆಯಿತು. ಹೀಗೆ ಆರಂಭವಾದ ನನ್ನ ಆಸಕ್ತಿಗೆ ಇನ್ನಷ್ಟು ಸ್ಫೂರ್ತಿ ಕೊಟ್ಟಿದ್ದು ಎಚ್. ನಾಗವೇಣಿ ಇವರ 'ಗಾಂಧಿ ಬಂದ' ಕಾದಂಬರಿ. ನಾನು ಸ್ನಾತಕೋತ್ತರ ಪದವಿಯಲ್ಲಿ ಅಧ್ಯಯನ ಮಾಡುತ್ತಿದ್ದಾಗ ತರಗತಿಯಲ್ಲಿ ನಡೆಯುತ್ತಿದ್ದ ವಾರ್ಷಿಕ ವಿಚಾರಸಂಕೀರ್ಣಕ್ಕೆ ಒಂದು ವಿಷಯವನ್ನು ಆಯ್ಕೆ ಮಾಡಿಕೊಳ್ಳಬೇಕಾಗಿತ್ತು. ಆಗ ತಕ್ಷಣಕ್ಕೆ ನನ್ನ ಮನಸ್ಸಿಗೆ ಹೊಳೆದದ್ದು ನಾಗವೇಣಿ ಎಚ್. ಇವರ ಕೃತಿಗಳು. ಅವುಗಳಲ್ಲಿ 'ಗಾಂಧಿ ಬಂದ' ಕಾದಂಬರಿಯನ್ನು ಆಯ್ಕೆ ಮಾಡಿಕೊಂಡು ಅದರಲ್ಲಿ ಬರುವ 'ಪ್ರಾದೇಶಿಕತೆಯ ಚಿತ್ರಣ' ಎನ್ನುವ ವಿಷಯವನ್ನು ಇಟ್ಟುಕೊಂಡು ಪ್ರಬಂಧ ರಚಿಸಿದೆ. ಆಗ ಈ ಪ್ರಬಂಧ ರಚನೆಗೆ ಪೂರಕವಾಗಿ ಕೆಲವು ಕೃತಿಗಳನ್ನು ಓದುವ ಅಗತ್ಯ ಇದ್ದಾಗ, ಶ್ರೀ ಪ್ರಭಾಕರ ನೀರ್‌ಮಾರ್ಗರವರ ಮೂರು-ನಾಲ್ಕು ಕೃತಿಗಳು ನನ್ನ ಗಮನಕ್ಕೆ ಬಂದವು. ಆಗ ಅವುಗಳನ್ನು ಓದುತ್ತಾ ಹೋದ ಹಾಗೆ ತುಳುನಾಡಿಗೆ ಸಂಬಂಧ ಪಟ್ಟ ನಾನಾ ರೀತಿಯ ಆಚರಣಾತ್ಮಕ ಕುಣಿತಗಳು, ಆರಾಧನೆಗಳು, ಜಾನಪದ ಮನರಂಜನಾ ಕಲೆಗಳು, ಕ್ರೀಡೆಗಳು, ~~ಹೀಗೆ ಸಾಮಾ~~ಜಿಕ ಮತ್ತು ಸಾಂಸ್ಕೃತಿಕ ವಿಚಾರಗಳು ಬೇರೆ ಬೇರೆ ಸಂದರ್ಭಗಳಲ್ಲಿ ಬಳಕೆಯಾಗಿರುವುದು ಕಂಡು ಬರುವುದರ ಜೊತೆಗೆ ಅವರ ಇನ್ನಷ್ಟು ಕೃತಿಗಳನ್ನು ಓದುವ ಪ್ರೇರಣೆಯನ್ನು ನೀಡಿತು.

ತುಳುನಾಡನ್ನು ಪ್ರತಿನಿಧೀಕರಿಸಿದ ವಿವಿಧ ಸಂಸ್ಕೃತಿಗಳು ನೀರ್‌ಮಾರ್ಗರವರ ಕಾದಂಬರಿಗಳಲ್ಲಿ ಪ್ರಕಟಗೊಂಡದ್ದರಿಂದ, ಅವು ನನ್ನ ಅಧ್ಯಯನಕ್ಕೆ ಸ್ಫೂರ್ತಿಯಾದವು. ಆದ್ದರಿಂದ ಇವೆಲ್ಲವೂಗಳನ್ನು ನಾನು ಗಮನದಲ್ಲಿ ಇಟ್ಟುಕೊಂಡು ಇವರ ಕಾದಂಬರಿಗಳಲ್ಲಿ ಕಂಡು ಬರುವ 'ತುಳು ಸಂಸ್ಕೃತಿಯ ಪ್ರತಿನಿಧೀಕರಣ' ಎನ್ನುವ ವಿಷಯವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿದ್ದೇನೆ. ಹಾಗಾಗಿ ತುಳುವ ಸಂಸ್ಕೃತಿಯನ್ನು ಪ್ರತಿನಿಧಿಸಿದ ವಿಚಾರಗಳನ್ನು ಬಳಸಿಕೊಂಡು ಇವರ ಕಾದಂಬರಿಗಳನ್ನು ಅಧ್ಯಯನ ಮಾಡುವುದು ಈ ನನ್ನ ಸಂಪ್ರಬಂಧದ ಭೌಗೋಳಿಕವಾದ, ಸಾಂಸ್ಕೃತಿಕವಾದ, ಸಾಹಿತ್ಯಿಕವಾದ ವ್ಯಾಪ್ತಿಯನ್ನು ಒಳಗೊಂಡ ಪ್ರಸ್ತುತ ಸಂಪ್ರಬಂಧವು ಒಟ್ಟು ಐದು ಅಧ್ಯಾಯಗಳನ್ನು ಹೊಂದಿದ್ದು, ಪ್ರತಿ ಅಧ್ಯಾಯದಲ್ಲೂ ಕೆಲವು ಉಪ ಅಧ್ಯಾಯಗಳು ಇವೆ. ಮೊದಲನೆ ಅಧ್ಯಾಯದಲ್ಲಿ ಅಧ್ಯಯನದ ಸ್ವರೂಪ, ಉದ್ದೇಶ, ವ್ಯಾಪ್ತಿ ಮತ್ತು ಅಧ್ಯಯನದ ಸಮೀಕ್ಷೆಯ ಕುರಿತಾಗಿ ತಿಳಿಸಲಾಗಿದೆ.

ಎರಡನೆ ಅಧ್ಯಾಯದಲ್ಲಿ ಕಾದಂಬರಿಕಾರರ ವ್ಯಕ್ತಿತ್ವ, ಸಾಹಿತ್ಯ ರಚನೆಯಲ್ಲಿ ಪ್ರೇರಕವಾದ ಅಂಶಗಳ ಜೊತೆಗೆ ಅವರ ಕೃತಿಗಳ ಪಟ್ಟಿಯನ್ನು ನೀಡಲಾಗಿದೆ ಹಾಗೂ ಕಾದಂಬರಿಗಳಲ್ಲಿ

ಪ್ರಕಟಗೊಳ್ಳುವ ತುಳುನಾಡಿನ ಪ್ರಾದೇಶಿಕತೆಯನ್ನು ಚರ್ಚಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ತುಳುನಾಡಿನ ಸಾಮಾಜಿಕ ಸ್ವರೂಪದಲ್ಲಿ ಕಾಲದಿಂದ ಕಾಲಕ್ಕೆ ಆದ ಬದಲಾವಣೆ, ಅಲ್ಲಿನ ಜನರ ನಂಬಿಕೆ ಮತ್ತು ಆಚರಣೆಗಳನ್ನು ಕಾದಂಬರಿಯ ದೃಷ್ಟಿಯಿಂದ ವಿವೇಚಿಸಲಾಗಿದೆ. ಬೇರೆ ಬೇರೆ ಪ್ರದರ್ಶನ ಕಲೆಗಳು ಮತ್ತು ಅವುಗಳನ್ನು ಆಚರಿಸುವಂತಹ ಸಂದರ್ಭ ಹಾಗೂ ಅವುಗಳಲ್ಲಿ ಇರುವ ವಿಶಿಷ್ಟತೆಯನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ತುಳುನಾಡಿನ ಧಾರ್ಮಿಕ ಸ್ವರೂಪದ ವಿವರಣೆಯನ್ನು ನಾಲ್ಕನೇ ಅಧ್ಯಾಯದಲ್ಲಿ ನೀಡಲಾಗಿದೆ. ಧಾರ್ಮಿಕ ಆಚರಣೆಗಳಾದ ನಾಗಾರಾಧನೆ ಮತ್ತು ಭೂತಾರಾಧನೆಗಳ ಆಚರಣೆಯ ಸಂದರ್ಭ ಮತ್ತು ಕಾಲವನ್ನು ಹೇಳುವುದರ ಜೊತೆಗೆ ಆ ಬಗೆಗಿನ ನಂಬಿಕೆಗಳು ಜನರ ಮನಸ್ಸಿನಲ್ಲಿ ಯಾವ ರೀತಿ ಕೆಲಸ ಮಾಡುತ್ತದೆ ಎಂಬುದನ್ನು ವಿವರಿಸಲಾಗಿದೆ. ನೀರ್‌ಮಾರ್ಗ ಅವರ ಎಲ್ಲಾ ಕಾದಂಬರಿಗಳಲ್ಲಿರುವ ತುಳುನಾಡಿನ ಪ್ರಮುಖ ಸಾಂಸ್ಕೃತಿಕ, ಸಾಮಾಜಿಕ ವಿಚಾರಗಳನ್ನು ಅಧ್ಯಯನಕ್ಕೆ ಒಳಪಡಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಅಧ್ಯಯನದ ದೃಷ್ಟಿಯಿಂದ ಅವರ ಎಲ್ಲಾ ಕಾದಂಬರಿಗಳನ್ನು ಗಮನಿಸಿಕೊಂಡಿದ್ದೇನೆ.

## ೧.೩ ಅಧ್ಯಯನ ಸ್ವರೂಪ

'ನೀರ್‌ಮಾರ್ಗರವರ ಕಾದಂಬರಿಗಳಲ್ಲಿ ತುಳುವ ಸಂಸ್ಕೃತಿಯ ಪ್ರತಿನಿಧೀಕರಣ' ಎಂಬ ಶೀರ್ಷಿಕೆಯನ್ನು ಇಟ್ಟುಕೊಂಡು ಸಂಪ್ರಬಂಧವನ್ನು ರಚಿಸಲಾಗಿದೆ. ಈ ಸಂಪ್ರಬಂಧದ ಅಧ್ಯಾಯಗಳು ಒಳಗೊಳ್ಳುವ ವಿಚಾರಗಳು ಮತ್ತು ಅವುಗಳ ವಿಶ್ಲೇಷಣೆಯು ಅಧ್ಯಯನದ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ. ಬೇರೆ ಬೇರೆ ಅಧ್ಯಾಯಗಳಲ್ಲಿ ಅಧ್ಯಯನದ ಸ್ವರೂಪವನ್ನು ತಿಳಿಸಲಾಗಿದೆ. ಇಲ್ಲಿ ಪ್ರಮುಖವಾದ ಮೂರು ಅಧ್ಯಾಯಗಳು ತಮ್ಮದೇ ಆದ ವೈಶಿಷ್ಟ್ಯವನ್ನು ಹೊಂದಿದ್ದು, ತುಳುನಾಡಿನ ಸಂಸ್ಕೃತಿಯನ್ನು ಪ್ರತಿಬಿಂಬಿಸುವಲ್ಲಿ ಸಾಧ್ಯವಾಗುತ್ತದೆ ಎಂಬ ಭಾವನೆ ನನ್ನದು. ಮುಖ್ಯವಾಗಿ ಕಾದಂಬರಿಗಳಲ್ಲಿ ಪ್ರಕಟವಾಗುವಂತಹ ತುಳುನಾಡಿನ ಸಂಸ್ಕೃತಿಯ ವಿವಿಧ ಮುಖಗಳನ್ನು ಬೇರೆ ಬೇರೆ ಮಗ್ಗುಲಿನಿಂದ ವಿಶ್ಲೇಷಿಸುವ ಪ್ರಯತ್ನ ನಡೆದಿದೆ. ತುಳುನಾಡಿನ ಆಚಾರ ವಿಚಾರಗಳು, ರೂಢಿ ಸಂಪ್ರದಾಯಗಳು, ನಂಬಿಕೆ–ಮೂಢನಂಬಿಕೆಗಳು, ಹಬ್ಬಹರಿದಿನಗಳು, ಮೇಲ್ವರ್ಗ–ಕೆಳವರ್ಗ, ಬಡವ–ಶ್ರೀಮಂತ, ಆಚರಣೆ–ಆರಾಧನೆ ಮುಂತಾದವುಗಳನ್ನು ಕಾದಂಬರಿಕಾರರು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಪರಿಭಾವಿಸಿಕೊಂಡ ಬಗೆಯನ್ನು ವಿಶ್ಲೇಷಿಸಲಾಗಿದೆ. ಆಧುನಿಕ ದಿನಗಳಲ್ಲಿ ತುಳು ಸಂಸ್ಕೃತಿಯು ತನ್ನ ಮೂಲ ಸತ್ತ್ವಗಳನ್ನು ಕಳಕೊಳ್ಳುವ, ಈಗಿನ ಜನರಿಗೆ ಈ ಬಗ್ಗೆ ಸರಿಯಾದ ಅರಿವು ಇಲ್ಲದೇ ಇರುವ ಇಂದಿನ ಸಂದರ್ಭದಲ್ಲಿ ನೀರ್‌ಮಾರ್ಗರವರ ಕಾದಂಬರಿಗಳು ಗತಕಾಲದ ಸಂಸ್ಕೃತಿಯನ್ನು ನೆನಪಿಸುತ್ತವೆ. ಇವರ ಎಲ್ಲಾ ಕಾದಂಬರಿಗಳಲ್ಲಿ ಅಭಿವ್ಯಕ್ತಿಗೊಳ್ಳುವ

ತುಳು ಸಂಸ್ಕೃತಿಯ ವಿಚಾರಗಳನ್ನು ಮರುವ್ಯಾಖ್ಯಾನಿಸುವ, ಸಾಧ್ಯವಾದಷ್ಟು ಮಟ್ಟಿಗೆ ಒಂದೆಡೆ ಸೇರಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಇವರ ಕಾದಂಬರಿಗಳಲ್ಲಿ ವಿಶ್ಲೇಷಿಸಲ್ಪಟ್ಟ ತುಳುನಾಡಿನ ಜನಪದ ಕುಣಿತಗಳು, ಆಚರಣೆಗಳು, ಆರಾಧನೆಗಳನ್ನು ಸಮರ್ಪಕವಾಗಿ, ಸ್ಪಷ್ಟವಾಗಿ ವಿವರಿಸುವ ಉದ್ದೇಶದಿಂದ ಇವುಗಳಿಗೆ ಪೂರಕವಾಗಿ ನಮ್ಮ ಪ್ರಸಿದ್ಧ ವಿದ್ವಾಂಸರುಗಳಾದ ಡಾ। ಅಮೃತ ಸೋಮೇಶ್ವರ, ಡಾ। ಬಿ.ಎ.ವಿವೇಕ್ ರೈ, ಡಾ। ಪಾಲ್ತಾಡಿ ರಾಮಕೃಷ್ಣ ಆಚಾರ್, ಡಾ। ಕೆ. ಚಿನ್ನಪ್ಪ ಗೌಡ, ಕೆ.ಮೋಹನ್ ಕೃಷ್ಣ ರೈ- ಇವರುಗಳ ವಿಚಾರಧಾರೆಗಳನ್ನು ಸಂದರ್ಭೋಚಿತವಾಗಿ ಬಳಸಿಕೊಂಡಿದ್ದೇನೆ. ಆ ಮೂಲಕ ತುಳುನಾಡಿನ ಸಂಸ್ಕೃತಿಯು ವಿವಿಧ ನೆಲೆಗಳನ್ನು ಸೀಮಿತ ಚೌಕಟ್ಟಿನೊಳಗೆ ತರುವ ಪ್ರಯತ್ನವನ್ನು ಮಾಡಲಾಗಿದೆ. ಕಾದಂಬರಿಗಳಲ್ಲಿ 'ತುಳುವ ಸಂಸ್ಕೃತಿ'ಯ ಪ್ರತಿನಿಧೀಕರಣದ ಸ್ವರೂಪವನ್ನು ಚರ್ಚಿಸುವ ಈ ಸಂಪ್ರಬಂಧವು ಪಠ್ಯಕೇಂದ್ರಿತ ಅಧ್ಯಯನವಾಗಿದೆ. ಆದ್ದರಿಂದ 'ತುಳುವ ಸಂಸ್ಕೃತಿ' ಕುರಿತಾಗಿನ ವಿಚಾರಗಳನ್ನು ಆರಂಭದಲ್ಲಿ ವಿವರಿಸಲಾಗಿದೆ. ಈ ವಿಚಾರಗಳನ್ನು ಇಟ್ಟುಕೊಂಡು ಮುಂದಿನ ಅಧ್ಯಯನವನ್ನು ವಿಸ್ತರಿಸಲಾಗಿದೆ. ತುಳುನಾಡಿನ ಸಂಸ್ಕೃತಿಯನ್ನು, ಪ್ರಾದೇಶಿಕತೆಯನ್ನು ಕುರಿತ ಕಾದಂಬರಿಗಳು ರಚಿತವಾಗಿರುವುದು ತುಂಬಾ ವಿರಳವಾಗಿರುವುದರಿಂದ, ಸಾಕಷ್ಟು ವಿಚಾರಗಳನ್ನು ಒಳಗೊಂಡ ಇವರ ಕಾದಂಬರಿಗಳು ಸಂಸ್ಕೃತಿಯ ಅಧ್ಯಯನಕ್ಕೆ ಯೋಗ್ಯವಾಗಿವೆ. ತುಳುನಾಡು, ನುಡಿ, ಸಂಸ್ಕೃತಿಯ ಬಗ್ಗೆ ಆಳವಾಗಿ ಯೋಚಿಸಬಲ್ಲ ನೀರ್‌ಮಾರ್ಗರವರು ತಮ್ಮ ಕೃತಿಗಳಲ್ಲಿ ಆ ಬಗ್ಗೆ ವಿಶೇಷವಾದ, ಸಮರ್ಪಕವಾದ, ನೈಜವಾದ ಸಂಗತಿಗಳನ್ನು ನಿರೂಪಿಸುವಲ್ಲಿ ಯಶಸ್ವಿಯಾಗಿದ್ದಾರೆ. ಆಧುನೀಕರಣ, ಜಾಗತೀಕರಣ, ಉದಾರೀಕರಣದ ಪ್ರಸ್ತುತ ಸಂದರ್ಭಗಳಲ್ಲಿ ಇಂತಹ ಕಾದಂಬರಿಗಳ ರಚನೆ, ಓದು ಮತ್ತು ಆ ಕುರಿತ ವಿಮರ್ಶೆಗಳು ಅರ್ಥಪೂರ್ಣವಾಗಿರುತ್ತದೆ.

## ೧.೪ ಈವರೆಗಿನ ಸಮೀಕ್ಷೆ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಡೆದ ಸಾಹಿತ್ಯಿಕ ಸಮಾರಂಭಗಳಲ್ಲಿ, ಸಾಹಿತ್ಯದ ಕುರಿತಾಗಿನ ಚರ್ಚೆಗಳು ನಡೆಯುವಲ್ಲಿ ಅಲ್ಲಲ್ಲಿ ನೀರ್‌ಮಾರ್ಗರವರ ಕೃತಿಗಳನ್ನು ಹೆಸರಿಸಲಾಗಿದೆ. ಇದನ್ನು ಹೊರತು ಪಡಿಸಿದಂತೆ ದಿನಪತ್ರಿಕೆಗಳಲ್ಲಿ ಇವರ ಪುಸ್ತಕಗಳ ಕುರಿತ ಕೃತಿ ಪರಿಚಯ, ಮಾರ್ಚ್ ೨೦೦೮ರ ತುಷಾರದಲ್ಲಿ ಒಂದು ವಿಮರ್ಶೆ ಮತ್ತು ಹಂಪಿಯ ಪ್ರಸಾರಾಂಗದಿಂದ ಬಿಡುಗಡೆಯಾದ ತುಳು ಸಾಹಿತ್ಯ ಚರಿತ್ರೆಯಲ್ಲಿ ಇವರ ಕಾದಂಬರಿಗಳ ಕುರಿತು ಪ್ರಸ್ತಾಪವಾಗಿದೆ. ಇದನ್ನು ಬಿಟ್ಟರೆ ಬೇರೆ ಯಾವ ಅಧ್ಯಯನಗಳು ನಡೆದಿಲ್ಲ. ಈ ಹಿನ್ನೆಲೆಯಿಂದ ಒಂದು ಸಣ್ಣ ಪ್ರಯತ್ನವಾಗಿ ಇವರ ಕಾದಂಬರಿಗಳ ಕುರಿತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

# ಅಧ್ಯಾಯ ೨

# ವ್ಯಕ್ತಿ–ವ್ಯಕ್ತಿತ್ವ–ಕೃತಿಗಳು

೨.೧ ವ್ಯಕ್ತಿ – ವ್ಯಕ್ತಿತ್ವ – ಕೃತಿಗಳು

೨.೨ ಕಾದಂಬರಿಗಳಲ್ಲಿ ಪ್ರಕಟಗೊಳ್ಳುವ ತುಳುನಾಡಿನ ಪ್ರಾದೇಶಿಕತೆ

# ಅಧ್ಯಾಯ ೨

## ೨.೧ ವ್ಯಕ್ತಿ – ವ್ಯಕ್ತಿತ್ವ – ಕೃತಿಗಳು

ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ಸಮೀಪದ 'ನೀರ್‌ಮಾರ್ಗ' ಎಂಬ ಪಚ್ಚೆ ರಂಗಿನ ಸುಂದರ ಪ್ರಕೃತಿಯ ನೆಲೆಯಾಗಿದ್ದ ಹಳ್ಳಿಯೊಂದರಲ್ಲಿ ಚಂದಪ್ಪ ಸುವರ್ಣ ಮತ್ತು ಹೇಮಾವತಿ ದಂಪತಿಗಳ ನಾಲ್ವರು ಮಕ್ಕಳಲ್ಲಿ ಹಿರಿಯ ಮಗನಾಗಿ ಜನಿಸಿದರು. ಬಡ ಕುಟುಂಬವೊಂದರಲ್ಲಿ ಜನಿಸಿದ ನೀರ್‌ಮಾರ್ಗರವರು ಸರಳತೆ, ಉದಾರತೆಗಳನ್ನು ಎಳವೆಯಿಂದಲೇ ಹೆತ್ತವರಿಂದ ಮೈಗೂಡಿಸಿಕೊಂಡು ಬಂದವರು. ಕಠಿಣ ಪರಿಶ್ರಮ ಹಾಗೂ ಅಧ್ಯಾಪಕರ ನಿರಂತರ ಪ್ರೋತ್ಸಾಹದಿಂದ ಚಿನ್ನದ ಪದಕದೊಂದಿಗೆ ಶ್ರೀ ಮಹಾವೀರ ಕಾಲೇಜು ಮೂಡಬಿದ್ರೆಯಿಂದ ಪದವಿ ಶಿಕ್ಷಣವನ್ನೂ ತದನಂತರ ಪ್ರತಿಷ್ಠಿತ ಮೈಸೂರು ವಿಶ್ವವಿದ್ಯಾನಿಲಯದಿಂದ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಪಡೆದರು.

೧೯೮೭ರಿಂದ ಮಂಗಳೂರು ವಿಶ್ವವಿದ್ಯಾನಿಲಯದ ಉಪಕುಲ ಸಚಿವರಾಗಿ ಆಡಳಿತಾತ್ಮಕ ಕೆಲಸ ಕಾರ್ಯಗಳ ನಿರ್ವಹಣೆಯ ಜೊತೆಗೆ ಅಂಚೆ ತೆರಪಿನ ಶಿಕ್ಷಣ ನಿರ್ದೇಶನಾಲಯ, ಮಂಗಳೂರು ಇದರ ಉಪನಿರ್ದೇಶಕರಾಗಿ ಸೇವೆಸಲ್ಲಿಸುತ್ತಿದ್ದಾರೆ. ಕತೆ, ಕವನ, ಕಾದಂಬರಿ, ಕಿರುನಾಟಕಗಳ ರಚನೆ ಇವರ ಆಸಕ್ತಿಯ ಸಾಹಿತ್ಯ ಪ್ರಕಾರಗಳು. ಇವರ ಹಲವಾರು ಕಿರುಕತೆಗಳು, ಕವಿತೆಗಳು ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಮಂಗಳೂರು ಆಕಾಶವಾಣಿಯಲ್ಲಿ ಅನೇಕ ಕಿರುನಾಟಕಗಳು ಪ್ರಸಾರವಾಗಿದೆ.

ಪ್ರಾಥಮಿಕ ಶಿಕ್ಷಣದ ಹಂತದಲ್ಲೇ ಸಾಹಿತ್ಯ, ಕಲೆ, ಸಂಸ್ಕೃತಿಗಳ ಬಗ್ಗೆ ವಿಶೇಷ ಒಲು, ಒಲವು ಇದ್ದ ಇವರಿಗೆ ತನ್ನ ಹಳ್ಳಿ, ಅಲ್ಲಿಯ ರಮಣೀಯ ನಿಸರ್ಗವು ಸಾಹಿತ್ಯದ ಬೆಳವಣಿಗೆಗೆ ಮೂಲ ಪ್ರೇರಣೆಯಾಗಿದೆ. ಸಾಹಿತ್ಯಾಧ್ಯಯನಕ್ಕೆ ಹೆಚ್ಚಿನ ಪ್ರೇರಣೆಯು ಸಾಹಿತಿ, ಸಂಶೋಧಕ ಹಾಗೂ ಅಧ್ಯಾಪಕರಾಗಿರುವ ಡಾ। ವಾಮನ ನಂದಾವರ ಅವರ ನುಡಿಗಳಿಂದ ದೊರಕಿತು. ದಕ್ಷಿಣ ಕನ್ನಡ ಜಿಲ್ಲೆಯ ಸಾಂಸ್ಕೃತಿಕ, ಸಾಮಾಜಿಕ ನೆಲೆಗಳ ಬಗ್ಗೆ ವಿಶೇಷ ಆಸಕ್ತಿಯಿಂದ ಶ್ರಮವಹಿಸಿ, ಸಂಶೋಧನೆ ನಡೆಸಿ ಅನುಭವಗಳ ಹಿನ್ನೆಲೆಯಲ್ಲಿ ವಿಚಾರಗಳನ್ನು ಸಾಹಿತ್ಯಕ್ಕೆ ಇಳಿಸುವುದೇ ಇವರ ಬರವಣಿಗೆಗಳ ಉದ್ದೇಶವಾಗಿದೆ. ಇವರ ಕೃತಿಗಳಲ್ಲಿ ಒಂದಾದ 'ಧೀಂಗಿಣ' ಕಾದಂಬರಿಗೆ ದಕ್ಷಿಣ ಕನ್ನಡ ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ 'ಶ್ರೇಷ್ಠ ಕೃತಿ' ಎಂಬ ಬಹುಮಾನ, 'ದಳವಾಯಿ ದುಗ್ಗಣ' ಎಂಬ ಕೃತಿಗೆ ಪ್ರತಿಷ್ಠಿತ ಪಣಿಯಾಡಿ ಪ್ರಶಸ್ತಿ, 'ತಂಬಿಲ' ಕಾದಂಬರಿಗೆ ಅಖಿಲ ಭಾರತ ಸಾಹಿತ್ಯ ಸಮ್ಮೇಳನದಲ್ಲಿ ಶ್ರೇಷ್ಠ ಕೃತಿ ಎಂಬ ಗೌರವಗಳು ಸಂದಿವೆ. ಅದೇ ರೀತಿ 'ಮಂಗಳೂರು ಕ್ರಾಂತಿ' ಕಾದಂಬರಿಗೆ ಕರಾವಳಿಯ ಸಾಂಸ್ಕೃತಿಕ ಪ್ರತಿಷ್ಠಾನದ ಸಾಹಿತ್ಯ ಪ್ರಶಸ್ತಿ ಹಾಗೂ ಪ್ರತಿಷ್ಠಿತ ವಿಶುಕುಮಾರ್ ಪ್ರಶಸ್ತಿಗಳು ಲಭಿಸಿವೆ.

೨೦೦೭-೦೮ನೇ ಸಾಲಿನ ರಾಜ್ಯಮಟ್ಟದ ಅಖಿಲ ಕರ್ನಾಟಕ ಬಾನುಲಿ ನಾಟಕ ಸ್ಪರ್ಧೆಯಲ್ಲಿ ಇವರ 'ಮಂಗಳೂರು ಕ್ರಾಂತಿ' ಎಂಬ ಬಾನುಲಿ ನಾಟಕ ಶ್ರೇಷ್ಠ ನಾಟಕ ಎಂಬ ಬಿರುದಿಗೆ ಭಾಜನವಾಗಿದೆ.

ಪಾಯಿತ್ತ, ಶಿಶಿರ, ಪ್ರತಿಶೋಧ, ತಿಲ್ಲಾನ, ಧೀಂಗಿಣ, ಅರ್ಘ್ಯ, ದಳವಾಯಿ ದುಗ್ಗಣ, ತಂಬಿಲ, ಕಂಬುಲ, ಮಂಗಳೂರು ಕ್ರಾಂತಿ, ಮಾದಿರ, ಮದಿಪು, ಮಥನ ಎಂಬ ಹದಿಮೂರು ಕಾದಂಬರಿಗಳನ್ನೂ, ಭೀಕರ ನ್ಯಾಯ ಕಟ್ಟೆ ಎಂಬ ಒಂದು ತುಳು ನಾಟಕವನ್ನು ಪ್ರಕಟಿಸಿರುತ್ತಾರೆ. ತನ್ನ ತಾಯಿಯ ಹೆಸರಿನ ಹೇಮಾವತಿ ಪ್ರಕಾಶನದ ಮೂಲಕ ಹೊಸ ಪ್ರತಿಭಾನ್ವಿತರನ್ನು ಪ್ರೋತ್ಸಾಹಿಸುವ, ದೃಷ್ಟಿಯಿಂದ ಕೃತಿಗಳನ್ನು ಪ್ರಕಟಿಸುತ್ತಾ ಬರುವುದರ ಜೊತೆಗೆ ಯುವವಾಹಿನಿಯ ಮೂಲಕ 'ಪ್ರಭಾಕರ ನೀರ್‌ಮಾರ್ಗ ಸಾಹಿತ್ಯ ಪ್ರಶಸ್ತಿ'ಯನ್ನು ಸ್ಥಾಪಿಸಿದ್ದಾರೆ. ವ್ಯಕ್ತಿತ್ವ ವಿಕಸನ ವಿಷಯದಲ್ಲಿ ಯುವಕರಿಗೆ ಮತ್ತು ವಿದ್ಯಾರ್ಥಿಗಳಿಗೆ ವಿಶೇಷ ತರಬೇತಿ ನೀಡುವುದು, ಜಿಲ್ಲಾ ಮಟ್ಟದಲ್ಲಿ ಯುವಸಮುದಾಯವನ್ನು ಒಗ್ಗೂಡಿಸಿ ಶಿಬಿರ, ವಿಚಾರ ಸಂಕಿರಣಗಳನ್ನು ನಡೆಸುವುದು ಇವರ ಚಟುವಟಿಕೆಗಳಾಗಿವೆ.

### ೨.೨ ಕಾದಂಬರಿಗಳಲ್ಲಿ ಪ್ರಕಟಗೊಳ್ಳುವ ತುಳುನಾಡಿನ ಪ್ರಾದೇಶಿಕತೆ

ಪ್ರಾದೇಶಿಕತೆ ಒಂದು ಸಂಕೀರ್ಣವಾದ ಪರಿಕಲ್ಪನೆ. ಇದು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಭೌಗೋಳಿಕವಾಗಿ ನಿಶ್ಚಿತವಾದ ಒಂದು ಪರಿಧಿಯೊಳಗೆ ಸೇರ್ಪಡೆಗೊಳ್ಳುವ ಎಲ್ಲಾ ರೀತಿಯ ಸಂಸ್ಕೃತಿಗಳು ಪ್ರಾದೇಶಿಕತೆ ಎನಿಸಿಕೊಳ್ಳುತ್ತದೆ. ಇದು ಭಾಷೆ, ಜಾನಪದ, ಇತಿಹಾಸ, ಐತಿಹ್ಯವನ್ನು ಒಳಗೊಂಡಿರುತ್ತದೆ. ಒಂದು ಪ್ರದೇಶದ ನಿರ್ದಿಷ್ಟ ಜನಜೀವನ,ಸ್ವರೂಪ, ಸಮಸ್ಯೆಗಳು, ಸಂಸ್ಕೃತಿ ಹಾಗೂ ಭೌಗೋಳಿಕ ಅಸ್ತಿತ್ವಕ್ಕೆ ಸಂಬಂಧಪಟ್ಟ ವಿವರಗಳು ಒಂದು ಕೃತಿಯಲ್ಲಿ ದಾಖಲಾದಾಗ ಅದು ಆ ಪ್ರದೇಶದ ಪ್ರಾದೇಶಿಕತೆ ಎನಿಸಿಕೊಳ್ಳುತ್ತದೆ. ಒಬ್ಬ ಕೃತಿಕಾರನ ಕೃತಿಯಲ್ಲಿ ಪ್ರಾದೇಶಿಕ ವಿವರಗಳು ಕಾಣಿಸಿಕೊಳ್ಳುವುದಕ್ಕೆ ಆತ ಹುಟ್ಟಿ ಬೆಳೆದ ಪರಿಸರವೇ ಕಾರಣವಾಗುತ್ತದೆ. ಕನ್ನಡದ ಪ್ರಸಿದ್ಧ ಕಾದಂಬರಿಕಾರರರಾದ ರಾಷ್ಟ್ರಕವಿ ಕುವೆಂಪು ಮತ್ತು ಡಾ।ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಪ್ರಾದೇಶಿಕತೆಯ ಸ್ವರೂಪದ ಚಿತ್ರಣ ಸ್ಪಷ್ಟವಾಗಿ ಗುರುತಿಸಬಹುದು. ಈ ಪ್ರಾದೇಶಿಕ ಕಾದಂಬರಿಗಳನ್ನು ಅವಲೋಕಿಸಿದಾಗ ಅವು ಒಂದು ಸಮಾಜದ ಬಹುಮುಖೀ ಸಂಸ್ಕೃತಿಗಳ ವಿವಿಧ ರೀತಿಯ ಬದಲಾವಣೆಗಳು ಹಾಗೂ ಗತಕಾಲದ ಆಗುಹೋಗುಗಳನ್ನು ಚರ್ಚಿಸಿರುವುದು ಕಂಡುಬರುತ್ತದೆ. ಆಧುನಿಕ ಸಮಾಜದ ಬದಲಾವಣೆಯ ಪ್ರಕ್ರಿಯೆಗಳನ್ನು ಈ ಕಾದಂಬರಿಗಳು ಬಹಳ ವಿಶಿಷ್ಟವಾಗಿ ದಾಖಲಿಸಿವೆ. ಸಾಂಸ್ಕೃತಿಕ ದೃಷ್ಟಿಯಿಂದಲೂ, ಪ್ರಾದೇಶಿಕತೆಯ ದೃಷ್ಟಿಯಿಂದಲೂ ಈ ಕಾದಂಬರಿಗಳು ಮಹತ್ತರವಾದ ಸ್ಥಾನವನ್ನು ಪಡೆದಿವೆ. ಈ ನೆಲೆಯಲ್ಲಿ ಎಚ್.ನಾಗವೇಣಿಯವರ 'ಗಾಂಧಿ ಬಂದ' ಕಾದಂಬರಿಯನ್ನು ಗಮನಿಸಿದಾಗ ಅಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಅರ್ಥಾತ್

ತುಳುನಾಡಿನ ಪ್ರಾದೇಶಿಕತೆಯ ಸ್ವರೂಪ ಅದ್ಭುತವಾಗಿ ನಿರೂಪಣೆಗೊಂಡಿರುವುದನ್ನು ಕಾಣಬಹುದು. ಇವರೆಲ್ಲರೂ ತಮ್ಮ ನಾಡಿನ ಸೊಬಗನ್ನು ಅರಿತವರು, ಅನುಭವಿಸಿದವರು, ಅಲ್ಲೇ ಬೆಳೆದವರು. ಸ್ಥಿತ್ಯಂತರದಲ್ಲಿರುವ ಸಮಾಜದ ಸಾಂಸ್ಕೃತಿಕ ಅಂಶಗಳನ್ನು ದಾಖಲಿಸುವ ಪ್ರಯತ್ನವನ್ನು ಮಾಡಿದವರು.

'ಪ್ರಾದೇಶಿಕತೆ' ಎನ್ನುವಂತಹುದು ಅನ್ಯ ಸಂಸ್ಕೃತಿಯ ಯಜಮಾನಿಕೆಯ ವಿರುದ್ಧ ಪ್ರತಿಭಟಿಸುವ ಧೋರಣಾತ್ಮಕವಾದ ಪರಿಕಲ್ಪನೆ. ಪ್ರಾದೇಶಿಕ ಸಂಸ್ಕೃತಿಗಳ ಬಗೆಗಿನ ಮಹತ್ವವಾದ ಒಳನೋಟಗಳನ್ನು ಈ ಪರಿಕಲ್ಪನೆಯು ಹೊಂದಿದೆ. ಪ್ರಾದೇಶಿಕತೆ ಒಂದು ಆಲೋಚನಾ ಕ್ರಮವೂ ಹೌದು; ವಿಶ್ಲೇಷಣಾ ಕ್ರಮವೂ ಹೌದು; ಇಲ್ಲಿ ಅನುಭವಗಳನ್ನು ಗ್ರಹಿಸುವ, ಸಂಘಟಿಸುವ ಮೂಲಗುಣಗಳನ್ನು ಸಂಸ್ಕೃತಿಯು ಲೇಖಕ ಅಥವಾ ಲೇಖಕಿಗೆ ಕೊಟ್ಟಿರುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಶ್ರೀ ನೀರ್‌ಮಾರ್ಗರವರ ಕಾದಂಬರಿಗಳನ್ನು ಓದಿಕೊಂಡಾಗ ಎಲ್ಲಾ ಕಾದಂಬರಿಗಳಲ್ಲೂ ತುಳುನಾಡಿನ ಪ್ರಾದೇಶಿಕತೆ ಕಾಣಿಸಿಕೊಳ್ಳುತ್ತದೆ. ತುಳುನಾಡಿನ ಸಾಂಪ್ರದಾಯಿಕ ಆಚರಣೆಗಳನ್ನು ಮತ್ತು ಕುಣಿತಗಳನ್ನು ದಾಖಲಿಸುವ ಪ್ರಯತ್ನ ನೀರ್‌ಮಾರ್ಗರವರ ಕಾದಂಬರಿಗಳಲ್ಲಿ ನಡೆಯುತ್ತದೆ. ಸಮಕಾಲೀನ ಸಮಾಜದೊಳಗೆ ಬದುಕುತ್ತಿರುವ ಬೇರೆ ಬೇರೆ ಧರ್ಮದ, ಭಾಷೆಯ, ಜಾತಿ, ಸಂಸ್ಕೃತಿಗಳ ಬದುಕಿನ ರೀತಿ ರಿವಾಜುಗಳನ್ನು ಇಲ್ಲಿ ಕಾಣಲು ಸಾಧ್ಯವಾಗುತ್ತದೆ. ಶ್ರೀ ನೀರ್‌ಮಾರ್ಗರವರೇ ಹೇಳುವಂತೆ "ಪ್ರಾದೇಶಿಕತೆ ಅನ್ನುವುದು ಸಾಹಿತ್ಯ ಕೃತಿಗಳಿಗೆ ಹೆಚ್ಚಿನ ಅಂತಃಸತ್ವವನ್ನು ಕೊಡಲು ಬಳಸುವ, ನಿರ್ದಿಷ್ಟ ಭೌಗೋಳಿಕ ಪ್ರದೇಶಗಳಿಗೆ ಸೀಮಿತವೂ ವಿಶಿಷ್ಟವೂ ಆದ ಭೂಲಕ್ಷಣಗಳು, ಸಂಸ್ಕೃತಿ, ಜಾನಪದ, ಭಾಷೆ, ಆಚರಣಾ ವಿಶೇಷ ಇತ್ಯಾದಿಗಳ ಬಳಕೆ,." (ಪ್ರಭಾಕರ್ ನೀರ್‌ಮಾರ್ಗ: ನನ್ನ ಕಾದಂಬರಿಗಳಲ್ಲಿ ಚಿತ್ರಿತವಾದ ಪ್ರಾದೇಶಿಕತೆ ಮತ್ತು ಸಂಸ್ಕೃತಿ; (ಅಪ್ರಕಟಿತ ಕೃತಿ) ೧೧) ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಮಲೆನಾಡಿನ ಪ್ರಾದೇಶಿಕತೆಯನ್ನು, ಕಾರಂತರು ಕರಾವಳಿ ತೀರದ ಪ್ರಾದೇಶಿಕತೆಯ ದಟ್ಟ ಅನುಭವದ ವಿರಾಟ್ ಸ್ವರೂಪವನ್ನು ಚಿತ್ರಿಸಿದ್ದಾರೆ. ನೀರ್‌ಮಾರ್ಗರವರು ತುಳುನಾಡಿನಲ್ಲಿ ತಾನು ನೋಡಿದ, ಅನುಭವಿಸಿದ ಆಚಾರ-ವಿಚಾರ, ಸಂಪ್ರದಾಯ, ಸಂಸ್ಕೃತಿಯನ್ನು ಕಾದಂಬರಿಗಳಲ್ಲಿ ಚಿತ್ರಿಸುವ ಮೂಲಕ ತುಳುನಾಡಿನ ಪ್ರಾದೇಶಿಕ ಸ್ವರೂಪಕ್ಕೆ ಮೆರುಗನ್ನು ತುಂಬಿದ್ದಾರೆ. ಪ್ರಾದೇಶಿಕ ಜಾನಪದ, ಪ್ರಾದೇಶಿಕ ಇತಿಹಾಸ, ಪ್ರಾದೇಶಿಕ ಐತಿಹ್ಯ -ಎಂಬೀ ಮೂರು ನೆಲೆಗಳಲ್ಲಿ ಪ್ರಾದೇಶಿಕತೆಯ ಸ್ವರೂಪವನ್ನು ಇವರ ಕಾದಂಬರಿಗಳಲ್ಲಿ ಗುರುತಿಸಬಹುದು. ತುಳುನಾಡಿನಲ್ಲಿ ಕಾಲದಿಂದ ಕಾಲಕ್ಕೆ ಪ್ರಾದೇಶಿಕತೆಯಲ್ಲಿ ಆದ ಬದಲಾವಣೆಗಳು ಇಲ್ಲಿ ದಾಖಲುಗೊಂಡಿವೆ.

ಪ್ರಾದೇಶಿಕತೆಯನ್ನೇ ಕಾದಂಬರಿಯ ಜೀವಾಳವನ್ನಾಗಿ ಮಾಡಿಕೊಂಡ ಕೆಲವು ಕಾದಂಬರಿಗಳ ಸಂಕ್ಷಿಪ್ತ ವಿವರಣೆಯನ್ನು ಕೆಳಗಡೆ ನೀಡಲಾಗಿದೆ :

ಸಾಂಸ್ಕೃತಿಕ ಚಟುವಟಿಕೆಗಳ ತಾಣವಾಗಿರುವ ಮಂಗಳೂರನ್ನು ಕೇಂದ್ರವಾಗಿಟ್ಟುಕೊಂಡು ಅಲ್ಲಿಯ ಪ್ರಾದೇಶಿಕತೆಯನ್ನು 'ಶಿಶಿರ' ಕಾದಂಬರಿಯಲ್ಲಿ ಚಿತ್ರಿಸಲಾಗಿದೆ. ತುಳುನಾಡಿನಲ್ಲಿ ಆಗಸ್ಟ್ ತಿಂಗಳು ಕಳೆದರೆ ನಂತರ ಯಾವ ಯಾವ ಆಚರಣೆಗಳು, ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುತ್ತವೆ ಎನ್ನುವುದನ್ನು ವಿವರವಾಗಿ ಚಿತ್ರಿಸಿದ್ದಾರೆ. ಯುವಕ ಸಂಘಗಳ ಮೂಲಕ ಆಯೋಜಿಸುವ ಬೇರೆ ಬೇರೆ ಕಾರ್ಯಕ್ರಮಗಳು ಇಲ್ಲಿಯ ಪ್ರಾದೇಶಿಕತೆಯನ್ನು ಗುರುತಿಸಲಿಕ್ಕೆ ಸಾಧ್ಯ ಎನ್ನುವುದನ್ನು ಕಾದಂಬರಿಕಾರರು ಮನದಟ್ಟು ಮಾಡುತ್ತಾರೆ. ಹರಿಕಥೆ, ಭೂತಕೋಲ, ನೇಮೋತ್ಸವ ಕರಾವಳಿಯ ಸಾಂಸ್ಕೃತಿಕ ರಂಗಕ್ಕೆ ಮೆರುಗನ್ನು ನೀಡಿದರೆ, ಕಂಬಳ, ಕೋಳಿ ಅಂಕ, ಯಕ್ಷಗಾನ ಬಯಲಾಟ ರೈತಾಪಿ ವರ್ಗಕ್ಕೆ ಆನಂದವನ್ನು ನೀಡುತ್ತದೆ. ಜಾನಪದ ಕಲೆಗಳು ಮತ್ತು ಕ್ರೀಡೆಗಳ ಮೂಲಕ ಜನರು ಒಂದುಗೂಡಿದಾಗ ಅಲ್ಲಿ ಜಾತ್ರೆಯ ಕಳೆ ಬರುತ್ತದೆ. ತುಳುನಾಡಿನಲ್ಲಿ ನಿಶ್ಚಿತ ದಿನಗಳಲ್ಲಿ ವರ್ಷದ ಏಳೆಂಟು ತಿಂಗಳಲ್ಲಿ ಬೇರೆ ಬೇರೆ ಕಡೆಗಳಲ್ಲಿ ನೇಮೋತ್ಸವದಲ್ಲಿ ಕಂಬಳ, ಕೋಳಿ ಅಂಕಗಳು ನಡೆಯುತ್ತ ಜನರಿಗೆ ಮುದ ನೀಡುವುದನ್ನು ಗಮನಿಸಬಹುದು. ವರ್ಷಕ್ಕೊಮ್ಮೆ ದೈವಾರಾಧನೆಗಳನ್ನು ಕೈಗೊಳ್ಳುವ ಮೂಲಕ ದೈವಗಳನ್ನು ಸಂತುಷ್ಟಿಗೊಳಿಸುವುದರ ಜೊತೆಗೆ ಜನರಲ್ಲಿ ಭಕ್ತಿ ಮೂಡಿಸಿ, ಶಿಷ್ಟಾಚಾರಗಳೇ ಊರಲ್ಲಿ ನೆಲೆಯಾಗಲಿ ಎಂಬ ಆಶಯವೂ ಇರುವುದು ಕಂಡು ಬರುತ್ತದೆ. ಕಾದಂಬರಿಕಾರರು ಹೇಳುವಂತೆ ಇಂತಹ ಸಂಸ್ಕೃತಿಗಳು ಹರಿದು ಹಂಚಿ ಹೋದ ಕುಟುಂಬಿಕರನ್ನು ದೈವಾರಾಧನೆಯ ನೆಲೆಯಲ್ಲಿ ಒಟ್ಟುಗೂಡಿಸುವ ಪ್ರಯತ್ನವೂ ಆಗಿದೆ. ಕೋಮು ಸೌಹಾರ್ದತೆಯ ವಿವರಗಳನ್ನು ಇಲ್ಲಿ ಕಾಣಬಹುದು. ದೇವಸ್ಥಾನ, ಗುಡಿಗೋಪುರ, ಚರ್ಚು, ಮಸೀದಿಗಳಲ್ಲಿ ವರ್ಷಾವಧಿಯಲ್ಲಿ ನಡೆಯುವ ಉತ್ಸವದಲ್ಲಿ ಜಾತಿ ಮತ ಬೇಧ ಮರೆತು ಭಾಗವಹಿಸುವ ಶಿಷ್ಟಾಚಾರ ತುಳುನಾಡಿನ ಪ್ರಾದೇಶಿಕ ಸಂಸ್ಕೃತಿಗೆ ಹಿಡಿದ ಕೈಗನ್ನಡಿಯಾಗಿದೆ.

ಸಾಮಾಜಿಕವಾಗಿ ಎಲ್ಲಾ ಜನಾಂಗಗಳಲ್ಲೂ ನಾಟಿ ವೈದ್ಯರು ಇರುತ್ತಾರೆ. ಅವರನ್ನು 'ಜನಪದ ವೈದ್ಯ'ರೆಂದು ಕರೆಯುತ್ತಾರೆ. 'ಅರ್ಘ್ಯ' ಕಾದಂಬರಿಯಲ್ಲಿ ಖತೀಜಮ್ಮ ಎಂಬ ಮುಸ್ಲಿಂ ಹೆಂಗಸು ಒಬ್ಬಳು ಜಾನಪದ ವೈದ್ಯೆ. ಆಕೆ ಸ್ವತಃ ಕಾಡಿಗೆ ಹೋಗಿ ಗಿಡಮೂಲಿಕೆ ಸಸ್ಯಗಳನ್ನು ಆರಿಸಿ ಅದರಿಂದ ಆಯಾಯ ರೋಗಕ್ಕೆ ಬೇಕಾದ ರೀತಿಯಲ್ಲಿ ಗುಳಿಗೆ, ಕಷಾಯ ತಯಾರಿಸುತ್ತಿದ್ದಳು. (ಅರ್ಘ್ಯ; ೨೦೦೨, ೧೬೭) ಹೀಗೆ ಎಲ್ಲಾ ಜಾತಿ ಧರ್ಮದ ಜನರು ಪರಸ್ಪರ ಸಹಕಾರ ಮನೋಭಾವದಿಂದ ಬಾಳುತ್ತಿದ್ದ ಸಂಸ್ಕೃತಿಯು ತುಳುನಾಡಿನ ಹಳ್ಳಿಗಳಲ್ಲಿ ಇದ್ದವು.

ಪ್ರಾದೇಶಿಕವಾಗಿ ಜನರನ್ನು ಒಗ್ಗೂಡಿಸುವಲ್ಲಿ ತುಳುನಾಡಿನ ರಂಗಕಲೆಗಳಲ್ಲಿ ಯಕ್ಷಗಾನ ವಿಶಿಷ್ಟ ಪಾತ್ರವಹಿಸಿದೆ ಎಂಬ ಅಂಶವನ್ನು 'ಧೀಂಗಿಣ' ಕಾದಂಬರಿಯಲ್ಲಿ ಗುರುತಿಸಿಕೊಳ್ಳಬಹುದು. ಯಕ್ಷಗಾನವು ಮನರಂಜನೆಯನ್ನು ನೀಡುವುದಲ್ಲದೆ ಭವ್ಯ ಸಂಸ್ಕೃತಿಯ

ಪರಿಚಯುವನ್ನೂ ನೀಡುತ್ತದೆ. ಭಾವೈಕ್ಯತೆಯ ದೃಷ್ಟಿಯಲ್ಲಿ ಜನರನ್ನು ಒಂದಾಗಿಸುವ ಶ್ರೇಷ್ಠ ಕಲೆ ಯಕ್ಷಗಾನ.

ಆಧುನಿಕತೆಗೆ ತೆರೆದುಕೊಂಡ ಯುವ ಮನಸ್ಸು ತುಳುನಾಡಿನಲ್ಲಿ ಹಳ್ಳಿಗಳ ಬದಲಾವಣೆಗೆ ಮುಂದಾಗಿರುವ ಅನೇಕ ವಿಚಾರಗಳನ್ನು ನೀರ್‌ಮಾರ್ಗರವರ ಕಾದಂಬರಿಗಳಲ್ಲಿ ಗುರುತಿಸಲಿಕ್ಕೆ ಸಾಧ್ಯವಾಗುತ್ತದೆ. ಊರಿನಲ್ಲಿ ಪುಂಡಾಟಿಕೆ ಮಾಡಿಕೊಂಡಿದ್ದಂತಹ ಸಾಮಾನ್ಯ ಮನುಷ್ಯನೊಬ್ಬ ಮುಂಬೈಗೆ ಹೋಗಿ ಅಲ್ಲಿ ವಾಮಮಾರ್ಗದಿಂದ ಹಣ ಸಂಪಾದಿಸಿಕೊಂಡು ಬಂದು ಊರಿನಲ್ಲಿ ದೊಡ್ಡ ಮನುಷ್ಯನೆನಿಸಿಕೊಳ್ಳಲು ಬಯಸುತ್ತಾನೆ. ಮುಂಬೈಯ ಹಣದಿಂದಾಗಿ ಊರಿನಲ್ಲಿ ಆದ ಬದಲಾವಣೆಯನ್ನು 'ಪ್ರತಿಶೋಧ' ಕಾದಂಬರಿಯಲ್ಲಿ ಗುರುತಿಸಬಹುದು. ಇಲ್ಲಿ ಬರುವ 'ಪೆವಮಲೆ' ಎಂಬ ಸಾಮಾನ್ಯ ಊರು ಮುಂಬೈಯ ಶ್ರೀಮಂತ ವ್ಯಕ್ತಿಯೊಬ್ಬನ ಕೈಗೆ ಸಿಕ್ಕಿ ಗಮನಾರ್ಹ ಬದಲಾವಣೆಗೆ ಒಳಗಾಗುತ್ತದೆ. ಇದುವರೆಗೂ ಪ್ರಶಾಂತವಾಗಿದ್ದ ಹಳ್ಳಿಯ ವಾತಾವರಣ ಶ್ರೀಮಂತರ ಮೂಲಕ ಯಾವ ರೀತಿಯ ಬದಲಾವಣೆಗೆ ಒಳಗಾಯಿತು, ಜನರನ್ನು ಯಾವ ರೀತಿಯ ತಲ್ಲಣಕ್ಕೆ ಒಳಗುಮಾಡಿತು ಎನ್ನುವುದನ್ನು ಈ ಕಾದಂಬರಿಯಲ್ಲಿ ಲೇಖಕರು ಈ ರೀತಿ ವಿವರಿಸುತ್ತಾರೆ.

"ಈಗ ಪೆವಮಾಲೆ ಮಾರ್ಗದಲ್ಲಿ ನಡೆಯಲು ಹೆದರಿಕೆ, ಯಾವಾಗ ಬುರ್ರನೆ ಕಾರು, ಜೀಪು ಬರುತ್ತದೆ ಎಂದು ತಿಳಿಯದು. ಅದು ನಾಗಾಲೋಟದಿಂದ ಸರ್ರನೆ ಬಂದಾಗ ಮಣ್ಣಿನ ಮಾರ್ಗದಲ್ಲಿ ತುಂಬಿದ್ದ ಧೂಳು ಗಾಳಿಗೆ ಹಾರಿ ದಾರಿಹೋಕರಿಗೆ ಮೆತ್ತಿಕೊಳ್ಳುತ್ತಿತ್ತು. ಆಮೇಲೆ ಅವರು ತೊಟ್ಟಿದ್ದ ಅಂಗಿ ಬಿಳಿ ಬಣ್ಣದ್ದೋ, ಕೆಂಪು ಬಣ್ಣದ್ದೋ ಎಂದು ಅನುಮಾನ ಪಡಬೇಕು. ಅದುವರೆಗೆ ನಿರಾಂತಕವಾಗಿ ಮಾರ್ಗದಲ್ಲಿ ಕ್ರಿಕೆಟ್ ಆಟವಾಡುತ್ತಿದ್ದ ಹುಡುಗರು ಈ ವಾಹನಗಳಿಂದಾಗಿ ಸರಿಯಾಗಿ ಆಟವಾಡಲು ಆಗದೆ ಹಿಡಿಶಾಪ ಹಾಕಿದರು. ಜನ ಈಗ ಮಾರ್ಗದ ಬಳಿ ಸುಳಿಯುವುದಿಲ್ಲ. ಎಲ್ಲಾದರೂ ಕಾಡುಮೇಡಿನ ಮೂಲಕ ಹಾದು ಹೋಗುತ್ತಾರೆ......" (ಪ್ರತಿಶೋಧ;೧೯೯೯,೫). ಇಲ್ಲಿ ಮುಂಬೈಯ ಹಣದಿಂದಾಗಿ ತುಳುನಾಡಿನ ಪ್ರಾದೇಶಿಕತೆಯಲ್ಲಿ ಆದ ಬದಲಾವಣೆಯನ್ನು ಹೇಳುತ್ತದೆ. ಇದೇ ರೀತಿ ತುಳುನಾಡಿನ ಹಲವು ಹಳ್ಳಿಗಳು ಆಧುನಿಕತೆಯ ನೆಪದಲ್ಲೋ, ಅಭಿವೃದ್ಧಿಯ ನೆಪದಲ್ಲೋ, ಶ್ರೀಮಂತಿಕೆಯ ಡೌಲನ್ನು ಪ್ರದರ್ಶಿಸುವ ಸಲುವಾಗಿಯೇ ನಗರೀಕರಣಕ್ಕೆ ಒಳಗಾಗುವ ಬಗ್ಗೆ ಲೇಖಕರಲ್ಲಿ ಆತಂಕವಿರುವುದನ್ನು ಹೇಳುತ್ತದೆ. ಇಂತಹ ಅನೇಕ ಪ್ರಾದೇಶಿಕ ಬದಲಾವಣೆಗಳು ನಾನಾ ಕಾರಣಗಳಿಂದಾಗಿ ಉಂಟಾದ ಸಂದರ್ಭವನ್ನು ಲೇಖಕರು ತಮ್ಮ ಕಾದಂಬರಿಗಳಲ್ಲಿ ವಿಶ್ಲೇಷಿಸುತ್ತಾ ಬಂದಿದ್ದಾರೆ. ತುಳುನಾಡು ತನ್ನ ನೈಜ ಸಂಸ್ಕೃತಿಯನ್ನು ಕಳಕೊಳ್ಳುವ ಸೂಚನೆಯೂ ಇದು ಹೌದು.

ಇವರ 'ಮಂಗಳೂರು ಕ್ರಾಂತಿ' ಕಾದಂಬರಿಗೆ ಬೆನ್ನುಡಿ ಬರೆದಿರುವ ಮಂಗಳೂರು

ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ। ಕೆ. ಅಭಯ ಕುಮಾರ್ ಅವರು ಹೀಗೆ ಹೇಳುತ್ತಾರೆ. "ಇವರ ಕಾದಂಬರಿಗಳು ಪ್ರಧಾನವಾಗಿ ತುಳುನಾಡಿನ ಪ್ರಾದೇಶಿಕ ಸೊಬಗನ್ನು ಹಿಡಿದಿಡುತ್ತದೆ. ಜಿಲ್ಲೆಯ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಆಯಾಮಗಳನ್ನು ಹಿಡಿದಿಡಲು ಇವರ ಕಾದಂಬರಿಗಳು ಪ್ರಯತ್ನಿಸುತ್ತವೆ. ಈ ದೃಷ್ಟಿಯಿಂದ ಶ್ರೀ ಪ್ರಭಾಕರ್‌ರವರು ಪ್ರಾದೇಶಿಕ ಸಂಸ್ಕೃತಿಯನ್ನು ತಮ್ಮ ಕಾದಂಬರಿಗಳಲ್ಲಿ ಅನಾವರಣಗೊಳಿಸಲು ಪ್ರಯತ್ನಿಸಿದ್ದಾರೆ. ಕಾದಂಬರಿಕಾರನಿಗೆ ತನ್ನ ಪ್ರದೇಶ, ಭಾಷೆ, ಸಂಸ್ಕೃತಿ, ಇತಿಹಾಸಗಳ ಮೇಲೆ ಪ್ರೀತಿ ಮತ್ತು ಅಭಿಮಾನವಿದ್ದಾಗ ಮಾತ್ರ ಇದು ಸಾಧ್ಯವಾಗುತ್ತದೆ. ಶ್ರೀ ಪ್ರಭಾಕರ್‌ರವರ ಕಾದಂಬರಿಗಳಲ್ಲಿ ಈ ರೀತಿಯ ದಟ್ಟವಾದ ಸಂವೇದನೆ ಮತ್ತು ಅನುಭವಗಳಿವೆ. ಈ ಕಾರಣದಿಂದಲೇ ಇವರ ಕಾದಂಬರಿಗಳು ಮುಖ್ಯವಾಗುತ್ತವೆ."

ಈ ಮೇಲಿನ ವಿವರಣೆಗಳನ್ನೇ ಇಟ್ಟುಕೊಂಡು ಗಮನಿಸಿದಾಗ ಇವರ ಪ್ರಮುಖ ಕಾದಂಬರಿಗಳಾದ ತಿಲ್ಲಾನ, ತಂಬಿಲ, ಕಂಬುಲ, ಮಾದಿರ ಮತ್ತು ಮದಿಪು ಮುಂತಾದವುಗಳಲ್ಲಿ ತುಳುನಾಡಿನ ಪ್ರಾದೇಶಿಕತೆಯ ದಟ್ಟ ಚಿತ್ರಣವನ್ನು ಗುರುತಿಸಬಹುದು. ಕಾದಂಬರಿಯ ಹೆಸರುಗಳೇ ತುಳುನಾಡಿಗೆ ಸಂಬಂಧಿಸಿದ ಕ್ರೀಡೆ, ಆಚರಣೆ ಮತ್ತು ಕುಣಿತಗಳ ಪಾರಿಭಾಷಿಕ ಪದಗಳು. ಈ ಪದಗಳು ತುಳುನಾಡಿನ ಪ್ರತಿಯೊಬ್ಬನಿಗೂ ಚಿರಪರಿಚಿತವಾದುದು. ಆಚರಣೆ ಮತ್ತು ಆರಾಧನೆಗೆಸಂಬಂಧಪಟ್ಟ ಹಲವು ಪ್ರಾದೇಶಿಕ ವಿವರಗಳು ಇಲ್ಲಿ ಕಂಡು ಬರುತ್ತದೆ. ಹಬ್ಬ ಹರಿದಿನಗಳು, ಮದುವೆ ಸಮಾರಂಭ, ಭೂತ ಬಿಡಿಸುವ ಕ್ರಿಯೆ, ಏನಾದರೂ ಅನಾರೋಗ್ಯ ಪೀಡಿತರಾದಾಗ ಅಥವಾ ಸಮಸ್ಯೆಗಳಿಗೆ ಈಡಾದಾಗ ಬಲ್ಮೆ ಕೇಳುವುದು, ಇಂತಹ ಅನೇಕ ನಂಬಿಕೆ ಮತ್ತು ಆಚರಣೆಗಳನ್ನು, ಕಟ್ಟುಪಾಡುಗಳನ್ನು ಚಿತ್ರಿಸುವ ಮೂಲಕ ತುಳು ಸಂಸ್ಕೃತಿಗೆ ಜೀವ ತುಂಬಿದ್ದಾರೆ. ತುಳುನಾಡಿನ ಮದುವೆಯ ಸಂದರ್ಭದಲ್ಲಿ ಕಂಡುಬರುವ ಕಟ್ಟುಪಾಡುಗಳನ್ನು, ಆಚರಣೆಗಳನ್ನು ಲೇಖಕರು 'ಮದಿಪು' ಕಾದಂಬರಿಯಲ್ಲಿ ಕಣ್ಣಿಗೆ ಕಟ್ಟುವಂತೆ ಯಥಾವತ್ತಾಗಿ ಚಿತ್ರಿಸಿದ್ದಾರೆ. ಒಂದು ಹಳ್ಳಿಯಲ್ಲಿ ಮದುವೆ ನಡೆದಾಗ ಪ್ರತಿಯೊಬ್ಬರೂ ಸ್ನೇಹ ಸೌಹಾರ್ದತೆಯಿಂದ ಹೇಗೆ ಪಾಲ್ಗೊಳ್ಳುತ್ತಿದ್ದರು ಎಂಬುದನ್ನು ಇಲ್ಲಿ ಕಾಣಬಹುದು. ಮದುವೆ ಮಂಟಪದ ಸಿಂಗಾರ, ಊರಿನವರೆಲ್ಲಾ ಸಂಭ್ರಮದಿಂದ ಭಾಗಿಯಾಗುವುದು, ತಮ್ಮಲ್ಲಿದ್ದ ವಸ್ತು ಒಡವೆಗಳನ್ನು ಕೊಡುವುದು ಹೀಗೆ ಪ್ರತಿಯೊಂದರಲ್ಲೂ ಪ್ರೀತಿ, ಆತ್ಮೀಯತೆಯಿರುತ್ತದೆ. ಊರಿನಲ್ಲೊಬ್ಬ ಗುರಿಕಾರ ಇರುತ್ತಿದ್ದ. ಆತ ಅಲ್ಲಿಯ ಮದುವೆ, ಸಾವು, ನೋವು ಹೀಗೆ ಎಲ್ಲಾ ಕಾರ್ಯಕ್ಕೂ ಮುಖಂಡ. ಎಲ್ಲದಕ್ಕೂ ಆತನಿಗೆ ಆಹ್ವಾನ ಕೊಡಬೇಕು. ಸ್ವಲ್ಪ ಏನಾದರೂ ಹೆಚ್ಚು ಕಡಿಮೆಯಾದರೆ ಆತನು ಸಿಡಿಯುತ್ತಿದ್ದ. ಸಮಾಜ ರೂಪಿಸಿದ ಜಾತಿ ಪದ್ಧತಿ, ವಿವಾಹ ಕಾರ್ಯಕ್ರಮಗಳಿಗೆ ಆತನ ಒಪ್ಪಿಗೆ ಬೇಕು. ಇಲ್ಲದೇ ಇದ್ದರೆ ಅವರಿಗೆ ಬಹಿಷ್ಕಾರ ಹಾಕುವ ಹಕ್ಕು ಆತನಿಗಿರುತ್ತಿತ್ತು.

ಮದುವೆಯ ಸಂಪ್ರದಾಯಗಳಿಗೆ ಸಂಬಂಧಪಟ್ಟ ವಿಚಾರವನ್ನು ನೀರ್‌ಮಾರ್ಗರವರು 'ಮದಿಪು' ಕಾದಂಬರಿಯಲ್ಲಿ ಈ ರೀತಿಯಾಗಿ ಚಿತ್ರಿಸುತ್ತಾರೆ. ಮದುವೆಯ ನಿಶ್ಚಯದ ದಿನ ಹುಡುಗಿಯ ತಂದೆ, ಹುಡುಗನ ಕಡೆಯ ಗುರಿಕಾರನಲ್ಲಿ ಹೇಳುವ ಮಾತು- " ನೀವು ನಾಲ್ಕು ಜನ ಗ್ರಹಸ್ಥರು ಯಾವ ಉದ್ದೇಶವಿಟ್ಟುಕೊಂಡು ಬಡವರ ಮನೆಗೆ ಬಂದಿದ್ದೀರಿ?" ಆಗ ಬಂದವರಲ್ಲಿ ಗುರಿಕಾರರು ನಗುತ್ತಾ, "ನಾವು ಮಾರುವ ಮುಂಬು ಇದೆಯಾ?, ಕೊಡುವ ಹೆಣ್ಣು ಇದೆಯಾ, ಎಂದು ಹಲವು ಊರುಗಳಿಗೆ ತಿರುಗುತ್ತಾ ಇಲ್ಲಿಗೆ ಬಂದೆವು" ಆಗ ಹುಡುಗಿ ತಂದೆ " ಮಾರುವ ಮುಂಬನ್ನು ಕನ್ಯಾ ಪರ್ಬದ ತಿಂಗಳಲ್ಲಿ ಮಾರಿಯಾಗಿದೆ. ಕೊಡುವ ಹೆಣ್ಣನ್ನು ಸುಗ್ಗಿ ಪಗ್ಗು ತಿಂಗಳಲ್ಲಿ ಮದುವೆ ಮಾಡಿಕೊಟ್ಟಾಗಿದೆ. ನೀವು ಸುಡುಬಿಸಿಲಿನಲ್ಲಿ ಇಲ್ಲಿಗೆ ಬಂದಿದ್ದೀರಿ. ಸ್ವಲ್ಪ ಅಸರು ಕುಡಿದು ಹೋಗಿ, ಹಾಗೆಯೇ ನಮ್ಮಲ್ಲಿ ಒಂದು ಚಿಕ್ಕ ಹೆಣ್ಣಿದೆ. ಪ್ರಾಯ ಬಲಿತಿಲ್ಲ. ಸರಿಯಾಗಿ ಬಟ್ಟೆ ಉಡಲು, ತಲೆ ಕೂದಲು ಬಾಚಲು ಬರುತ್ತಿಲ್ಲ. ಸಣ್ಣ ಮಕ್ಕಳೊಂದಿಗೆ ಆಟವಾಡುವ ಪ್ರಾಯ. ನಿಮಗೆ ಹೆಣ್ಣು ನೋಡಿ ಆಗುವುದಾದರೆ ಮುಂದೆ ಮಾತನಾಡೋಣ" (ಮದಿಪು; ೨೦೦೮ ,೮೮-೮೯) ಎಂಬ ವಿವರಗಳು ಬಹಳ ಸಹಜವಾಗಿ ಮೂಡಿ ಬಂದಿದೆ. ತುಳುನಾಡಿನ ಭಾಷೆಯ ಸೊಗಡು, ಮಾತುಗಾರಿಕೆಯಲ್ಲಿರುವ ಶಿಷ್ಟತೆ ಹಾಗೆಯೇ ಉಳಿದು ಬಂದಿದೆ. ಹೆಣ್ಣು ನೋಡಿ ಆದನಂತರ ಬರಿ ಕೇಳುವುದು, ಊರಿನ ಜಾತಿಪದ್ಧತಿಯ ಕೂಡು ಕಟ್ಟನಂತೆ ಕೂಡುಕಟ್ಟಿಗೆ ಸಂಬಂಧಿಸಿದ ಮಡಿವಾಳನಿಗೆ ಸಂಪ್ರದಾಯದಂತೆ ಮುಹೂರ್ತ ನಿಘಂಟು ಮಾಡಲು ಆಹ್ವಾನ ನೀಡುವುದು, ನಂತರ ಮಾವಂದಿರು ವೀಳ್ಯ ಬದಲಾಯಿಸಿಕೊಳ್ಳುವ ಕ್ರಮ ಇದನ್ನು 'ಕಾಯಿ ಪಗಪುನಿ' ಎನ್ನುತ್ತಾರೆ, ತದನಂತರ 'ಕಾಯಿ ತಿನ್ಪುನಿ', ದೊಂಪ ಮುಹೂರ್ತವನ್ನು ನಡೆಸಲಾಗುತ್ತದೆ. ಮದುವೆಗೆ ಮೂರು ದಿನ ಇರುವಾಗ ಮದುಮಗನಿಗೆ ಮಾಡುವ ಸಂಪ್ರದಾಯಗಳು, ವೀಳ್ಯದೆಲೆ, ಅಡಿಕೆ ಹೋಳು, ಸುಣ್ಣವನ್ನು ಬೆರೆಸಿ ಮದುರಂಗಿಯನ್ನು ಚೆನ್ನಾಗಿ ಅಗೆದು ಕೈಗೆ ಹಚ್ಚುವ 'ಮದುರಂಗಿ ಶಾಸ್ತ್ರ', ಶೋಭಾನೆ, ಪಾಡ್ದನಗಳು ಮದುಮಗನಿಗೆ ಸಂಬಂಧಿಸಿದ್ದಾದರೆ, ಮದುಮಗಳ ಮನೆಯಲ್ಲಿ ನಡೆಯುವ ಕಾರ್ಯಕ್ರಮಗಳು ಬೇರೆಯೇ ಆಗಿರುತ್ತದೆ. ಮದುಮಗಳು ದಿಬ್ಬಣ ಹೊರಡುವ ಮೊದಲು 'ಮೂರ್ತ ಸೇಸೆ' ಮಾಡಲಾಗುತ್ತದೆ. ನಂತರ ಮದುವೆಯ ಮಂಟಪಕ್ಕೆ ಹೋಗುವುದು ಅಲ್ಲಿನ ವಿಧಿವಿಧಾನಗಳಲ್ಲಿ ಬಹಳ ಮುಖ್ಯವಾದ ಒಂದು ಸಂಪ್ರದಾಯವೆಂದರೆ, 'ಕಂಚಿ ದೀಪಿನಿ'. ಇಲ್ಲಿ ವಧುವರರ ಮುಂದೆ ಒಂದು ಕಂಚಿನ ಬಟ್ಟಲು ಇಟ್ಟು ಉಡುಗೊರೆ ನೀಡುವವರು ಆ ಬಟ್ಟಲಿನಲ್ಲಿ ಉಡುಗೊರೆ ನೀಡಬೇಕು. ಆಗ ಅಲ್ಲಿ ಗಂಡು ಮತ್ತು ಹೆಣ್ಣಿನ ಕಡೆಯ ಗುರಿಕಾರರು ಇಬ್ಬರೂ ಇರುತ್ತಾರೆ. ಇವರು ಕಂಚಿಯಲ್ಲಿ ಸೇರಿದ ಉಡುಗೊರೆಯನ್ನು ಸಭೆಗೆ ಜೋರಾಗಿ ಕೂಗಿ ಹೇಳುತ್ತಾರೆ. ಇದಕ್ಕೆ 'ಕಂಚಿ ಕರೆಯುವುದೆಂದೂ' ಹೇಳುತ್ತಾರೆ. ಮದುವೆ ಸಮಾರಂಭದ ಕೊನೆಯ ಕಾರ್ಯಕ್ರಮವೆಂದರೆ ಹೆಣ್ಣಿನ ತಾಯಿಯಿಂದ ಅಳಿಯನಿಗೆ

ಸತ್ಕಾರ ಸಮಾರಂಭ. ಇದನ್ನು 'ಮಾಮಿಸಿಕೆ', 'ತೊಡಮನೆ' ಎಂದು ಕರೆಯುತ್ತಾರೆ. ಹೀಗೆ ಈಗಿನ ಆಧುನಿಕರಿಗೆ ಮರೆತೇ ಹೋಗಿರುವಂತಹ ಅನೇಕ ಸಂಪ್ರದಾಯಗಳನ್ನು ಲೇಖಕರು ಕಾದಂಬರಿಯಲ್ಲಿ ಗುರುತಿಸಿಕೊಳ್ಳುತ್ತಾರೆ.

ಮಾರ್ನಮಿ, ದೀಪಾವಳಿಯಂತಹ ಹಬ್ಬ ಹರಿದಿನಗಳ ಸಂದರ್ಭದಲ್ಲಿ ನಡೆಯುವ ಕೋಳಿ ಅಂಕ, ಗದ್ದೆಯಲ್ಲಿ ಕೆಲಸ ಮಾಡುವಾಗ ಹಾಡುವ ಪಾಡ್ದನ, ಒಬೇಲೆ ನಾಡಿನ ಅಮೂಲ್ಯ ಸಂಸ್ಕೃತಿಗೆ ನಿದರ್ಶನವಾಗಿದೆ. ಆಟಿ ತಿಂಗಳಲ್ಲಿ ಮನೆಯ ಕಸ ಹೊಡೆಯುವ ಕೆಲಸ, ಅಟ್ಟ, ಜಂಗ, ಪಕ್ಕಾಸು, ಜಂತಿಗಳ ಹೊಗೆ ಹಿಡಿದ ಬಲೆಯನ್ನು ಶುಚಿಗೊಳಿಸುವುದು, ತುಳುನಾಡಿನ ಹೆಂಚಿನ ಮನೆಗಳಲ್ಲಿ ನಡೆದು ಬಂದ ಕಟ್ಟುಪಾಡು. ಹೀಗೆ ತುಳುನಾಡಿನ ಉದ್ದಕ್ಕೂ ಕಂಡುಬರುತ್ತಿದ್ದಂತಹ ಸಂಪ್ರದಾಯಗಳನ್ನು ಪ್ರಾದೇಶಿಕತೆಯ ನೆಲೆಯಲ್ಲಿ ಗುರುತಿಸಿಕೊಂಡಾಗ ಇವು ತುಳುನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ನಮ್ಮ ಮುಂದೆ ತೆರೆದಿಡುತ್ತದೆ. ಯಕ್ಷಗಾನ, ಬಯಲಾಟ, ನಾಟಕ, ಹರಿಕಥೆ ಮುಂತಾದ ಮನೋರಂಜನಾ ವಿಷಯಗಳು ತುಳುನಾಡಿನ ಜನರ ಅವಿಭಾಜ್ಯ ಅಂಗಗಳಾಗಿದ್ದವು. ಅನೇಕ ಜಾನಪದ ಸಂಪ್ರದಾಯಗಳು, ಜಾನಪದ ಮಾಂತ್ರಿಕ ಆಚರಣೆಗಳು ತುಳುನಾಡಿನ ಗ್ರಾಮೀಣ ಪ್ರದೇಶಗಳಲ್ಲಿ ನಡೆಯುತ್ತಿವೆ. ಇವೆಲ್ಲವೂ ಇಲ್ಲಿಯ ಪ್ರಾದೇಶಿಕತೆಯನ್ನು ರೂಪಿಸುವಲ್ಲಿ ಸಹಕಾರಿಯಾಗುತ್ತವೆ. ನಿರ್ದಿಷ್ಟ ಪ್ರದೇಶಕ್ಕೆ ಮಾತ್ರ ಸೀಮಿತವಾದ ಸಂಸ್ಕೃತಿ, ಆಚರಣೆ, ಆರಾಧನೆ, ಸಂಪ್ರದಾಯಗಳು ಪ್ರಾದೇಶಿಕತೆಯ ಒಳಗಡೆ ಬರುತ್ತದೆ. ಒಂದು ಪ್ರಾದೇಶಿಕ ಸಂಸ್ಕೃತಿಯ ಸ್ವರೂಪವನ್ನು ಅಧ್ಯಯನ ಮಾಡುವಾಗ ಆ ಸಂಸ್ಕೃತಿಯಲ್ಲಿ ಪ್ರಕಟವಾಗುವ ಕೆಲವು ಹೆಸರುಗಳೂ ಪ್ರತಿನಿಧೀಕರಣಗೊಳ್ಳುತ್ತದೆ. ಚಾರಿತ್ರಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಅವು ಮಹತ್ವವನ್ನು ಪಡೆಯುತ್ತದೆ. ನೀರ್‌ಮಾರ್ಗರವರ ಕಾದಂಬರಿಗಳು ಈ ದೃಷ್ಟಿಯಿಂದಲೂ ಪರಿಪೂರ್ಣತೆಯನ್ನು ಪಡೆದಿದೆ. ಇಲ್ಲಿ ವ್ಯಕ್ತವಾಗುವ ಕೆಲವು ಸ್ಥಳ ನಾಮಗಳು, ಕುಲನಾಮಗಳು, ವೃತ್ತಿ ನಾಮಗಳು, ಕ್ರೀಡೆ-ಆರಾಧನೆ-ಆಚರಣೆಗೆ ಸಂಬಂಧಪಟ್ಟ ಪಾರಿಭಾಷಿಕ ಪದಗಳು, ಇಲ್ಲಿನ ಪ್ರಾದೇಶಿಕ ಭೌಗೋಳಿಕ ಹಿನ್ನೆಲೆಯನ್ನು ಪ್ರಕಟಪಡಿಸುತ್ತದೆ. ಪ್ರಾದೇಶಿಕತೆಯನ್ನು ಪ್ರತಿಬಿಂಬಿಸುವ ಕೆಲವು ಹೆಸರುಗಳು ಇವರ ಕಾದಂಬರಿಗಳಲ್ಲಿ ಕಂಡುಬರುತ್ತದೆ. ಅವುಗಳೆಂದರೆ ನೀರ್‌ಮಾರ್ಗ. ಕುಡುಪು, ಪೆದಮಾಲೆ, ಕೆಲರಾಯಿ, ಕುಲಶೇಖರ, ಮೇರ್ಲಪದವು, ನೆಕ್ಕರೆಪದವು, ಕುಂಟಲಗುಡ್ಡೆ, ಮಾಣೂರು, ಕೇಪುಲಗುಡ್ಡೆ ಮುಂತಾದವು. ತುಳುನಾಡಿನ ಜಾನಪದ ಕ್ರೀಡೆಗಳಲ್ಲೊಂದಾದ ಕೋಳಿ ಅಂಕಕ್ಕೂ ದೈವದ ಕೋಲಬಲಿಗೂ ಸಂಬಧವಿದ್ದುದನ್ನು ಕಾದಂಬರಿಕಾರರು ಗುರುತಿಸಿದ್ದಾರೆ. ಕೋಲಬಲಿ ಆಗುತ್ತಿದ್ದಾಗ ಇನ್ನೊಂದೆಡೆ ಕೋಳಿ ಅಂಕವೂ ನಡೆಯುತ್ತದೆ. ಆಗ ಆ ಕೋಳಿ ಅಂಕಕ್ಕೆ ಬರುವ ಬೇರೆ ಬೇರೆ ಜಾತಿಯ ಕೋಳಿಗಳ ಹೆಸರನ್ನು ಕಾದಂಬರಿಕಾರರು ತಿಳಿಸುತ್ತಾರೆ. ಅವುಗಳೆಂದರೆ ಬೊಲ್ಲೆ, ಕಬ್ರೊಲ್ಲೆ, ಉರಿಯೆ , ಕೆಮ್ಮಯಿರೆ, ಕಡಲೆ ಮುಂತಾದವು. ಇವುಗಳೆಲ್ಲಾ ಕೋಳಿಗೆ ಸಂಬಂಧಪಟ್ಟ ಪ್ರಾದೇಶಿಕ ಹೆಸರುಗಳು. ಹೀಗೆ ಪ್ರಾದೇಶಿಕತೆಯ ಅನೇಕ ರೂಪಗಳು ಕಾದಂಬರಿಯಲ್ಲಿ ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ.

ಮನರಂಜನಾ ಕ್ರೀಡೆಯಾಗಿ ಕಾಣಿಸಿಕೊಂಡ ಕೋಳಿ ಅಂಕ ಹಾಗೂ ಕಂಬಲಗಳು ಇಂದು ಪ್ರತಿಷ್ಠೆಯ ವಿಚಾರಗಳಾಗಿ ಮಾರ್ಪಟ್ಟಿವೆ. ತುಳುನಾಡಿನ ಗುತ್ತಿನ ಮನೆಗಳಲ್ಲಿ

ಕಂಬುಲದಂತಹ ಜನಪದ ಕ್ರೀಡೆಗಳು ನಡೆಯುತ್ತಿದ್ದವು. ಇದು ಹಣ, ಅಹಂಕಾರ, ಮದ, ಸ್ವಪ್ರತಿಷ್ಠೆಯ, ಜಿದ್ದಿನ ಹಣಾಹಣಿಯಾಗಿದೆ. ಈ ಎರಡೂ ಕ್ರೀಡೆಗಳು ತುಳುನಾಡಿನ ಜನರ ಸಾಮಾಜಿಕ, ಆರ್ಥಿಕ ಪ್ರತಿಷ್ಠೆಯ ವಿಷಯವಾಗಿದೆ ಎಂಬುದನ್ನು ಕಾದಂಬರಿಯ ಮೂಲಕ ತಿಳಿಯಬಹುದು. ಉಳ್ಳವರು ಮತ್ತು ಇಲ್ಲದವರು ಎಂಬ ಎರಡು ವರ್ಗವನ್ನು ಪ್ರತಿನಿಧಿಸುತ್ತವೆ. ಸಾಮಾನ್ಯ ವ್ಯಕ್ತಿಯೊಬ್ಬ ಕಂಬಳದ ಕೋಣವನ್ನಾಗಲಿ, ಅಂಕದ ಕೋಳಿಯನ್ನಾಗಲಿ ಸಾಕುವುದು, ಕ್ರೀಡೆಯಲ್ಲಿ ತೊಡಗಿಸಿಕೊಳ್ಳುವುದು ಕಷ್ಟ ಸಾಧ್ಯವಾದ ವಿಚಾರವೇ ಸರಿ. ಸಾಮಾಜಿಕವಾಗಿ ಜನರಲ್ಲಿ ತಾರತಮ್ಯ ಭಾವನೆಗಳನ್ನು ಈ ಕ್ರೀಡೆಗಳು ಉಳಿಸಿಕೊಂಡು ಬಂದವು. ಮೂಲದಲ್ಲಿ ಕಂಬುಲವು ಕೃಷಿ ಸಂಬಂಧಿಕ್ರೀಡೆಯಾಗಿದ್ದು, ಅದಕ್ಕೆ ಅದರದೇ ಆದ ಜಾನಪದ ಮಹತ್ವವೂ ಇತ್ತು. ಈ ಕ್ರೀಡೆಯಲ್ಲಿ ಬೇರೆ ಬೇರೆ ವಿಧಗಳಿರುತ್ತವೆ. ಕಂಬಳವು ಧಾರ್ಮಿಕ ವಿಧಿವಿಧಾನಗಳೊಂದಿಗೆ, ಸಂಪ್ರದಾಯಗಳೊಂದಿಗೆ ಆಚರಿಸಿಕೊಂಡು ಬಂದಿರುವಂತಹುದು. ಕಂಬಳಕ್ಕೆ ಸಂಬಂಧಿಸಿದಂತೆ ಆ ದಿನ ಭೂತಕೋಲವೂ ನಡೆಯುತ್ತದೆ, ಇದು ವಿಶೇಷವಾಗಿ ಗುತ್ತಿನ ಮನೆಯಲ್ಲಿ ಮಾತ್ರ. ಕೋಲದೊಂದಿಗೆ ಕೋಣಗಳನ್ನು ಕಂಬಳಕ್ಕೆ ಅಣಿಗೊಳಿಸುವ ಸಂಪ್ರದಾಯ ತುಳುನಾಡಿನಲ್ಲಿ ಕಂಡುಬರುತ್ತದೆ. ಕಂಬಳದ ಯಜಮಾನ ಕಂಬಳದ ದಿನ ನಿಶ್ಚಯವಾದಂದಿನಿಂದ ಅದು ಕೊನೆಯಾಗುವವರೆಗೂ ಮಾಂಸ, ಮದ್ಯಗಳನ್ನು ವರ್ಜಿಸಬೇಕೆಂಬ ನಿಯಮವಿದೆ. ಹಾಗೆಯೇ ಇನ್ನೊಂದು ಮುಖ್ಯವಾದ ವಿಷಯವೇನೆಂದರೆ ಜಾನುವಾರುಗಳು ಕಾಯಿಲೆಗೆ ಈಡಾದರೆ ಕಂಬಳದ ಗದ್ದೆಗಳಿಗೆ ಕೋಣಗಳನ್ನು ಇಳಿಸುತ್ತೇವೆಂಬ ಹರಕೆ ಕಟ್ಟುವ ಪದ್ಧತಿಯೂ ರೂಢಿಯಲ್ಲಿದೆ. ಇಂತಹ ನಂಬಿಕೆ ಮತ್ತು ಆಚರಣೆಗಳು ಯಾವುದೇ ಪ್ರಾದೇಶಿಕ ಸಂಸ್ಕೃತಿಯೊಳಗಡೆ ಅಲ್ಲಿಯ ನಾಗರಿಕತೆಯನ್ನು ಪ್ರತಿನಿಧಿಸುತ್ತದೆ.

ನೀರ್‌ಮಾರ್ಗರವರ ಕಾದಂಬರಿಗಳಲ್ಲಿ ನಾವು ಕಾಣುವ ಕೆಲವು ಸ್ಥಳನಾಮಗಳು ಅಲ್ಲಿಯ ಪ್ರಾದೇಶಿಕ ವೈಶಿಷ್ಟ್ಯತೆಯನ್ನು ನಿರೂಪಿಸುತ್ತದೆ. ಇವು ಒಂದು ಪ್ರಕೃತಿ ವೈಚಿತ್ರ್ಯ, ನಿರ್ದಿಷ್ಟ ಗುರುತು, ಘಟನೆ, ಐತಿಹಾಸಿಕ ಅಥವಾ ಧಾರ್ಮಿಕ ಹಿನ್ನೆಲೆಯನ್ನು ನಿರೂಪಿಸುವ ನಾಮಗಳಾಗಿವೆ. ಇಂತಹ ಕೆಲವು ಸ್ಥಳನಾಮಗಳು ಹೀಗಿವೆ: ನೀರುಮಾರ್ಗ, ಪೆದಮಾಲೆ, ಕೆಲರಾಯಿ, ಕುಲಶೇಖರ, ಮೇರ್ಲಪದವು.....ಇತ್ಯಾದಿ. ಹೀಗೆ ಕಾದಂಬರಿಗಳಲ್ಲಿ ಬರುವ ಸ್ಥಳನಾಮಗಳ ಯಾದಿಯನ್ನು ಪರಿಶೀಲಿಸಿದಾಗ ಅವು ನಿಶ್ಚಿತ ಪ್ರದೇಶದ ಪ್ರಾದೇಶಿಕ ವಿವರಗಳನ್ನು ಒಳಗೊಂಡಿರುವುದು ಸ್ಪಷ್ಟವಾಗುತ್ತದೆ. ಇದೇ ರೀತಿ ಬೇರೆ ಬೇರೆ ಆರಾಧನೆ ಮತ್ತು ಸಂಸ್ಕೃತಿಗೆ ಸಂಬಂಧಪಟ್ಟ ಪಾರಿಭಾಷಿಕ ಪದಗಳು ಪ್ರಾದೇಶಿಕತೆಯ ಸ್ವರೂಪವನ್ನು ಗುರುತಿಸುವಲ್ಲಿ ಸಹಕಾರಿಯಾಗುತ್ತದೆ. ಇಂತಹ ಹೆಸರುಗಳು ಸ್ಥಳಗಳ ಗುಣಸ್ವರೂಪವನ್ನು, ಅನನ್ಯ ವೈಶಿಷ್ಟ್ಯವನ್ನೂ, ಆಂತರಿಕ ಸ್ವರೂಪವನ್ನೂ ಸಂವಹನ ಮಾಡುತ್ತದೆ.

ವೃತ್ತಿ ಸಂಬಂಧಿ, ಕುಲ ಸಂಬಧಿ, ಆಚರಣೆ ಸಂಬಂಧಿ ವಿಚಾರಗಳು ನೈಜ ತುಳು ಬದುಕಿನ ಒಳನೋಟಗಳನ್ನು ತುಳುವಿನ ವಿಶಿಷ್ಟ ಸಂಸ್ಕೃತಿಯನ್ನು ತೋರ್ಪಡಿಸುತ್ತಾ ಸಮಗ್ರ ಗ್ರಾಮೀಣ ಜನಜೀವನವನ್ನು ತೆರೆದಿಡುವಷ್ಟು ವಿವರಗಳು ನೀರ್‌ಮಾರ್ಗರವರ ಕಾದಂಬರಿಗಳಲ್ಲಿ ವ್ಯಕ್ತವಾಗಿವೆ. ಪ್ರಾದೇಶಿಕ ಭಾಷೆಯ ನಿರೂಪಣೆಯನ್ನು ನೀಡಲಾಗಿದೆ.

# ಅಧ್ಯಾಯ ೩

# ತುಳುನಾಡಿನ ಸಾಮಾಜಿಕ ಸ್ವರೂಪ

# ಅಧ್ಯಾಯ ೩: ತುಳುನಾಡಿನ ಸಾಮಾಜಿಕ ಸ್ವರೂಪ

ಸಂಕೀರ್ಣ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿರುವ ತುಳುನಾಡು ಕಾಲದಿಂದ ಕಾಲಕ್ಕೆ ನಾನಾರೀತಿಯ ಸ್ಥಿತ್ಯಂತರಗಳನ್ನು ಒಳಗೊಂಡಿದೆ. ಸಾಮಾಜಿಕವಾಗಿ, ಆರ್ಥಿಕವಾಗಿ ಬದಲಾವಣೆಗಳನ್ನು ಕಾಣುತ್ತಲೇ ಬಂದ ತುಳುನಾಡಿನ ಸಾಮಾಜಿಕ ಸ್ವರೂಪವನ್ನು ಮೂರು ನೆಲೆಗಳಲ್ಲಿ ಗುರುತಿಸಿಕೊಳ್ಳಬಹುದು. ಅವುಗಳೆಂದರೆ ಸ್ವಾತಂತ್ರ್ಯ ಪೂರ್ವದ ಸಾಮಾಜಿಕ ಸ್ವರೂಪ, ಸ್ವಾತಾಂತ್ರ್ಯ ನಂತರದಿಂದ ಭೂ ಮಸೂದೆಯ ತನಕದ ಸಾಮಾಜಿಕ ಸ್ವರೂಪ, ಭೂ ಮಸೂದೆಯ  ಬಳಿಕದ ಸಾಮಾಜಿಕ ಸ್ವರೂಪ ಎಂದು. ಈ ಮೂರು ಸ್ಥಿತಿಯಲ್ಲೂ ಒಟ್ಟು ಜನಜೀವನದಲ್ಲಿ ಮಹತ್ತರವಾದ ಬದಲಾವಣೆಗಳನ್ನು ಕಾಣಲು ಸಾಧ್ಯವಾಗುತ್ತದೆ. ತುಳುನಾಡಿನ ಜನಜೀವನದ ಒಟ್ಟು ಹಿನ್ನೆಲೆಯಲ್ಲಿ ೧೯೭೪ ರಲ್ಲಿ ಜಾರಿಗೆ ಬಂದ ಭೂ ಮಸೂದೆ ಕಾನೂನಿನ ಪಾತ್ರ ಬಹಳ ಮುಖ್ಯವಾದುದು. ತುಳುನಾಡಿನ ಪಾರಂಪರಿಕ ಜೀವನ ವಿಧಾನದಲ್ಲಿ ಹಾಸುಹೊಕ್ಕಾಗಿ ಅರ್ಥಪಡೆದುಕೊಂಡಿದ್ದ ಜಮೀನ್ದಾರೀ ವ್ಯವಸ್ಥೆಯೊಳಗಡೆ ಇದ್ದ ಧಣಿ-ಒಕ್ಕಲು ಪದ್ಧತಿ, ಭೂಸುಧಾರಣಾ ಮಸೂದೆಯಿಂದಾಗಿ ಕೊನೆಗೊಂಡು ಸಾಮಾಜಿಕ ಸ್ಥಿತ್ಯಂತರಕ್ಕೆ ಮಹತ್ವದ ಕಾರಣವಾಯಿತು. ಧನಿ-ಒಕ್ಕಲುಗಳ ನಡುವಿನ ಸಾಮಾಜಿಕ ಸಂಘರ್ಷಕ್ಕೆ ಹಾದಿಮಾಡಿಕೊಟ್ಟಿತ್ತು. ಉಳುವವನೇ ಭೂಮಿಯ ಒಡೆಯನಾಗಿ ಪರಿವರ್ತನೆಯಾದಾಗ ಅವರೆಗೆ ಭೂಮಿಯಲ್ಲಿ ಗೇಣಿ ಒಕ್ಕಲಾಗಿ ಬದುಕಿದ್ದವರಿಗೆ ಒಬ್ಬ ಸಾಮಾನ್ಯ ಹಿಡುವಳಿದಾರನಾಗಿ ಬದುಕುವ ಪರಿಸ್ಥಿತಿ ನಿರ್ಮಾಣವಾಯಿತು. ಅಲ್ಲಿಯವರೆಗೂ ಜಮೀನ್ದಾರರಾಗಿ ಮೆರೆಯುತ್ತಿದ್ದವರು ಜಮೀನನ್ನು ಕಳಕೊಳ್ಳಬೇಕಾಯಿತು. ಅರ್ಥ ವ್ಯವಸ್ಥೆಯೂ ಹಂಚಿಕೆಯಾಯಿತು. ಹೀಗೆ ಸಾಮಾಜಿಕ ವ್ಯವಸ್ಥೆಯಲ್ಲಿ ಕ್ರಾಂತಿಕಾರಿ ಬದಲಾವಣೆಗಳಾದುವು.

ಅದುವರೆಗೆ ಸಾಗುವಳಿಕೆಲಸ, ಮೀನುಗಾರಿಕೆ ಕೆಲಸ, ಜಾತಿಸಂಬಂಧಿ ವೃತ್ತಿಗಳನ್ನಷ್ಟೇ ನಂಬಿಕೊಂಡಿದ್ದ ಪ್ರದೇಶಗಳಲ್ಲಿ ಕಾರ್ಖಾನೆಗಳು ತಲೆ ಎತ್ತಲು ಪ್ರಾರಂಭಿಸಿದುವು. ಇದು ಜನರಿಗೆ ಹೊಸದಾದ ಅನ್ನದ ದಾರಿಯನ್ನು ತೋರಿಸಿತು. ಹಳ್ಳಿಗಳಿಂದ ಜನರು ಪೇಟೆಗೆ ಹೋಗಲಾರಂಭಿಸಿದರು. ಇದರಿಂದ ಇಲ್ಲಿಯವರೆಗೆ ಬಡತನ ಬೇಗೆಯಲ್ಲಿ ಬೇಯುತ್ತಿದ್ದ, ಸಾಗುವಳಿ ಮಾಡುತ್ತಿದ್ದ ಬಾಲಗೇಣಿ ಒಕ್ಕಲಿನ ಕುಟುಂಬ ಕಾರ್ಖಾನೆಗಳತ್ತ ವಲಸೆ ಹೋದಾಗ ಅದು ಭೂ ಹಿಡಿವಳಿದಾರರ ಮೇಲೆ ಅಗಾಧ ಪರಿಣಾಮವನ್ನು ಉಂಟು ಮಾಡಿತು. ನಂತರ ಬೀಡಿ ಉದ್ಯಮ ಬಂತು. ಇದು ಗ್ರಾಮೀಣ ಸ್ತ್ರೀಯರಲ್ಲಿ ಸ್ವಾಭಿಮಾನ ಬೆಳೆಸಿತು. ಆರ್ಥಿಕವಾಗಿ ಜನರು ಸಮರ್ಥರಾದ ಹಾಗೆ ಅವರ ಜೀವನ ಪದ್ಧತಿಯಲ್ಲೂ, ಆಚರಣೆಗಳಲ್ಲೂ ಬದಲಾವಣೆಗಳು ಕಾಣಿಸಿಕೊಂಡವು. ತುಳುನಾಡಿನ ಬಂಟ ಜನಾಂಗ ಹೊಂದಿದ್ದ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿಡಿತದ ದ್ಯೋತಕವಾಗಿದ್ದ ಗುತ್ತಿನಮನೆಗಳು ಅಸ್ತಿತ್ವವನ್ನು

ಕಳೆದು ಕೊಂಡವು. ಸಾಮಾಜಿಕ ಸ್ಥಿತಿಯಲ್ಲಿ ಇಂತಹ ಬದಲಾವಣೆಗಳು ಕಾಣಿಸಿಕೊಂಡರೂ ಇಲ್ಲಿನ ಜನರು ತಮ್ಮ ಸಾಂಪ್ರದಾಯಿಕ ವೃತ್ತಿ, ಪಾರಂಪರಿಕ ಆಚರಣೆ, ರೂಢಿಸಂಪ್ರದಾಯಗಳನ್ನು ಉಳಿಸಿಕೊಂಡು ಬಂದಿರುವುದರ ವಿವರಗಳು ನೀರ್‌ಮಾರ್ಗರವರ ಕಾದಂಬರಿಗಳಲ್ಲಿ ಕಾಣಿಸಿಕೊಳ್ಳುತ್ತದೆ.

ತುಳುನಾಡಿನಲ್ಲಿ ಬೇರೆ ಬೇರೆ ಭಾಷೆಗಳನ್ನು ಮಾತನಾಡುವ ಜನರಿರುವಂತೆ ಬೇರೆ ಬೇರೆ ಜಾತಿ, ಧರ್ಮ, ವರ್ಗ, ಪಂಗಡಗಳಿಗೆ ಸೇರಿದ ಜನರು ಕಂಡು ಬರುತ್ತಾರೆ. ಇಲ್ಲಿಯ ಜನರ ಪ್ರಧಾನ ಕಸುಬು.  ಇಲ್ಲಿ ಎಲ್ಲಾ ವರ್ಗದ ಜನರೂ ಬೇಸಾಯದಲ್ಲಿ ತೊಡಗಿಸಿಕೊಳ್ಳುತ್ತಾರೆ. ಹಾಗೆಂದೇ ವಂಶಪಾರಂಪರಿಕವಾಗಿ ಬಂದ ಸಾಂಪ್ರಾದಾಯಿಕ ಕಸುಬುಗಳನ್ನು ತಮ್ಮ ಜಾತಿ ಧರ್ಮ ವರ್ಗಕ್ಕೆ ಅನುಗುಣವಾಗಿ ಮಾಡಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಜಾತಿ, ಧರ್ಮ, ಪಂಗಡಗಳೊಳಗೆ ಉಪಜಾತಿಗಳೂ ಕಂಡು ಬರುತ್ತದೆ. ಅಲ್ಲಿ ಮತ್ತೆ ಉಪಜಾತಿಗೆ ಅನುಗುಣವಾಗಿ ಬೇರೆ ಬೇರೆ ವೃತ್ತಿಗಳು ಕಂಡು ಬರುತ್ತದೆ. ಉದಾ: ಪರಿಶಿಷ್ಟ ಜಾತಿ ಎಂದಾಗ ಅಲ್ಲಿ ಮೋಗೆರ, ನಲಿಕೆ, ಪಂಬದ, ಪರವ ಹೀಗೆ ಈ ಪ್ರತಿಯೊಂದು ಉಪಜಾತಿಗೂ ಅವರದ್ದೇ ಆದ ಉಪವೃತ್ತಿಗಳು ಇರುತ್ತವೆ. ತುಳುನಾಡಿನ ಸಾಮಾಜಿಕ ಸ್ವರೂಪವನ್ನು ಅವಲೋಕಿಸಿದಾಗ ಅಲ್ಲೊಂದು ಶಿಸ್ತು, ಕ್ರಮ, ನಿಯಮವಿದೆ. ಸಾಮಾಜಿಕವಾಗಿ ಜನರ ಒಗ್ಗೂಡುವಿಕೆ, ಆಚಾರ, ವಿಚಾರಗಳು, ನೋವು–ನಲಿವುಗಳು, ಒಂದು ಸಮುದಾಯದ ಸಾಂಸ್ಕೃತಿಕ ಬದುಕನ್ನು ಪ್ರತಿನಿಧಿಸುತ್ತದೆ. ಇಲ್ಲೊಂದು ಸಮಾನ ಧರ್ಮವಿರುತ್ತದೆ. ಪ್ರಾದೇಶಿಕವಾದ ಕೆಲವೊಂದು ಸಾಮಾಜಿಕ, ಸಾಂಸ್ಕೃತಿಕ ಭಿನ್ನತೆಗಳಿದ್ದರೂ ಅವೆಲ್ಲವೂ ಅವರ ಸಂಸ್ಕೃತಿಯ ರಕ್ಷಣೆಯೇ ಆಗಿರುತ್ತದೆ. ಇಲ್ಲಿ ಒಂದೇ ರೀತಿಯ ಜೀವನ ಕ್ರಮವಿರದಿದ್ದರೂ ಸಾಮೂಹಿಕವಾದ ಐಕ್ಯತೆ ಪ್ರಧಾನವಾಗಿ ಕಂಡುಬರುತ್ತದೆ. ಅಂದರೆ ಸಮೂಹದಲ್ಲಿ ಜನರು ಒಂದಾಗುತ್ತಾರೆ. ಪ್ರತಿಯೊಂದು ಜಾತಿ, ವರ್ಗವು ತಮ್ಮ ಪರಿಧಿಯೊಳಗೆ ಒಂದು ಸಂಸ್ಕೃತಿಯನ್ನು ಕಟ್ಟಿಕೊಂಡು, ಸಮಷ್ಠಿಯಲ್ಲಿ ಒಂದಾಗುವ ಪರಂಪರೆ ಹಿಂದಿನಿಂದಲೇ ನಡೆದುಕೊಂಡು ಬಂದಿರುವುದಾಗಿದೆ. ಧಾರ್ಮಿಕ ನೆಲೆಯಲ್ಲಿ ಸೃಷ್ಟಿಗೊಂಡ ಜಾತಿ, ವರ್ಣ ವ್ಯವಸ್ಥೆ ಇಂದಿಗೂ ನಡೆದುಕೊಂಡು ಬಂದಿದೆ.

ತುಳು ನಾಡಿನ ಸಾಮಾಜಿಕ ಬದುಕಿನ ಸ್ವರೂಪವನ್ನು ಕಂಡುಕೊಳ್ಳಬೇಕಾದರೆ ಇಲ್ಲಿ ಸಿಗುವ ಜಾನಪದ ವಿಚಾರಗಳತ್ತವೂ ಗಮನಹರಿಸಬೇಕಾಗುತ್ತದೆ. ಗಾದೆ, ಒಗಟು, ಕಥೆ, ಆಚರಣೆ, ನಂಬಿಕೆ ಮೊದಲಾದ ಜಾನಪದ ಪರಿಕರಗಳು ಸಾಮಾಜಿಕ ಬದುಕಿನ ಸ್ಥೂಲನೋಟವನ್ನು ಕೊಡುತ್ತದೆ. ಮಾನವನ ಹುಟ್ಟಿನಿಂದ ಸಾವಿನವರೆಗೆ ಬರುವ ಅನೇಕ ಜೀವನಾವರ್ತನ ಆಚರಣೆಗಳು, ಸಾಮೂಹಿಕವಾಗಿ ನಡೆಯುವ ಆರಾಧನಾ ವಿಧಾನಗಳು ಸಂಪ್ರದಾಯ ಬದ್ಧವಾಗಿ ನಡೆಯುವ ಮೇಳ ಜಾತ್ರೆಗಳನ್ನು ತುಳುನಾಡಿನ ಸಮಾಜದಲ್ಲಿ

ಗುರುತಿಸಬಹುದು. ಒಂದೊಂದು ಜಾತಿ ಧರ್ಮಕ್ಕೆ ಅನುಗುಣವಾಗಿ ಸಾಮಾಜಿಕ ಆಚರಣೆ ಸಂಪ್ರದಾಯಗಳಲ್ಲಿ ವ್ಯತ್ಯಾಸವಿರುತ್ತದೆ. ಹುಟ್ಟು–ಸಾವು, ಮದುವೆ ಮುಂತಾದ ಆಚರಣೆಗಳು ಬೇರೆ ಬೇರೆಯಾಗಿರುತ್ತದೆ. ಇಲ್ಲಿ ಅವಿಭಕ್ತ ಕುಟುಂಬ ಇತ್ತು. ಸಾಮೂಹಿಕವಾಗಿ ಒಂದು ಕುಟುಂಬದ ಜನರು ಪರಸ್ಪರ ಪ್ರೀತಿ ಸಹಕಾರದಿಂದ ಜೀವನ ಮಾಡುತ್ತಿದ್ದರು. ಕೌಟುಂಬಿಕವಾಗಿ ಇತ್ತೀಚಿನವರೆಗೆ ಅಳಿಯ ಸಂತಾನ ಪದ್ಧತಿಯನ್ನು ತುಳುನಾಡಿನಲ್ಲಿ ಅನುಸರಿಸುತ್ತಿದ್ದರು. ಇಲ್ಲಿ ಸಹೋದರಿಯ ಹೆಣ್ಣು ಮಕ್ಕಳಿಗೆ ಆಸ್ತಿಯಲ್ಲಿ ಹಕ್ಕು ಇರುತಿತ್ತು. ನಂತರ ಕಾಲಕ್ರಮೇಣ ಮನೆಯ ಯಜಮಾನ ಸ್ವಾರ್ಥ ಕುತಂತ್ರಗಳಿಂದ ಆಸ್ತಿಯೆಲ್ಲಾ ಒಬ್ಬನ ಕೈಯಲ್ಲೇ ಕೇಂದ್ರಿಕರಣವಾದ ಸ್ವರೂಪವನ್ನು ಕಾದಂಬರಿಗಳಲ್ಲಿ ಗುರುತಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ.

ಸಾಮಾಜಿಕವಾಗಿ ಪುರುಷರು ಮತ್ತು ಮಹಿಳೆಯರು ಇಬ್ಬರೂ ಶ್ರಮಜೀವಿಗಳಾಗಿದ್ದು, ಕೌಟುಂಬಿಕ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತಿದ್ದರು. ಮಹಿಳೆಯರು ಪುರುಷರಿಗೆ ಕೆಲಸ ಕಾರ್ಯ, ಗುಣಸ್ವಭಾವಗಳಲ್ಲಿ ಸಮಾನರಾಗಿ ಇರುತ್ತಿದ್ದರು. ಹಾಗೆಯೇ ಪರೋಪಕಾರಿಗಳು, ಉದಾರಿಗಳು ಅನ್ನುವುದು 'ಮದಿಪು' ಕಾದಂಬರಿಯಲ್ಲಿ ಬರುವ ವಿಚಾರವನ್ನು ಓದಿದಾಗ ಅರಿವಾಗುತ್ತದೆ. ಈ ಕಾದಂಬರಿಯಲ್ಲಿ ಸಾಮಾನ್ಯ ಮಹಿಳೆ ಅಂಬಕ್ಕ ಪತಿಯ ಮಾತನ್ನು ಮೀರುತಿರಲಿಲ್ಲ ಮನೆಯ ಯಜಮಾನನಿಗೆ ಸರಿಯಾದ ಒಡತಿಯಾಗಿ ಕಾರ್ಯನಿರ್ವಹಿಸುತ್ತಿದ್ದಳು. ತುಳುನಾಡಿನ ಮನೆಗಳಲ್ಲಿ ಇರುವ ಉತ್ತಮ ಸಂಸ್ಕಾರ ಸಂಸ್ಕೃತಿಯನ್ನು ಕಾದಂಬರಿ ಈ ರೀತಿ ಚಿತ್ರಿಸುತ್ತದೆ "......ಅವರ ಮನೆಯೆಂದರೆ ಒಂದು ಧರ್ಮ ಛತ್ರದಂತೆ. ದೇವರು ಬೇಕಾದಷ್ಟು ಕೊಟ್ಟಿದ್ದಾರೆ. ದಿನನಿತ್ಯ ಒಂದು ಹತ್ತಿಪ್ಪತ್ತು ಜನ ವಿವಿಧ ಕೆಲಸ ಕಾರ್ಯಗಳಿಗೆ ಕುಪ್ಪಯ್ಯನೊಂದಿಗೆ ಮಾತನಾಡಲು ಬಂದೇ ಬರುತ್ತಾರೆ. ಆಗ ಈಗಿನಂತೆ ಕಾಫಿ, ಬೆಲ್ಲನೀರು, ಚಾ ಇಲ್ಲ, ಬೆಲ್ಲದ ಕಷಾಯ ಇಲ್ಲವೇ ಅಸರಿಗೆ ಹುಳಿ ಷರಬತ್ತು ಬಂದವರಿಗೆಲ್ಲ ಕುಡಿಯಲು ಕೊಟ್ಟು ಕಳುಹಿಸುವುದು. ಊಟದ ಹೊತ್ತಿಗೆ ಬಂದರೆ ಊಟ ಪಾಪ ನಡೆದುಕೊಂಡು ದೂರದಿಂದ ದಣಿದು ಬರುತ್ತಾರೆ. ಅವರಿಗೆ ಹೊತ್ತು ಹೊತ್ತಿಗೆ ಊಟ ತಿಂಡಿ ಕೊಟ್ಟು ಸತ್ಕರಿಸುವುದು ಅಂಬಕ್ಕನ ಕೆಲಸ. ಕೆಲವು ಜನ ದಾಕ್ಷಿಣ್ಯದಿಂದ ಬೇಡ ಅಂದರೂ ಅಂಬಕ್ಕನಿಂದ ಮಾತ್ರ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಬೇಡ ಅಂದರೂ ಒತ್ತಾಯಿಸಿ ತಿನ್ನಿಸುವುದು ಅವರ ಜಾಯಮಾನ"(ಮದಿಪು; ೨೦೦೮, ೧೬) ಇಂತಹ ಅನೇಕ ಸನ್ನಿವೇಶಗಳು ಬೇರೆ ಬೇರೆ ಕಾದಂಬರಿಗಳಲ್ಲಿ ವ್ಯಕ್ತವಾಗಿವೆ. ಆ ಮೂಲಕ ತುಳುನಾಡಿನ ಜನರಲ್ಲಿದ್ದ ವಿಶಿಷ್ಟ ಸಂಸ್ಕೃತಿಗಳಾದ ಹಂಚಿ ತಿನ್ನುವುದು, ಇನ್ನೊಬ್ಬರನ್ನು ಗೌರವಿಸುವುದು, ದೀನ ದಲಿತರ ಏಳಿಗೆಗೆ ಶ್ರಮಿಸುವುದು, ಪರೋಪಕಾರಕ್ಕಾಗಿ ಶರೀರವನ್ನು ಮೀಸಲಿಡುವುದು ಈ ಮುಂತಾದ ಮೌಲ್ಯಗಳು ಕಾದಂಬರಿಯ ಬೇರೆ ಬೇರೆ ಸಂದರ್ಭಗಳಲ್ಲಿ ಪ್ರಕಟವಾಗುತ್ತದೆ. ಆಶಯ ಪ್ರಧಾನವಾದ ಸಾಮಾಜಿಕ ವ್ಯವಸ್ಥೆಯನ್ನು ಲೇಖಕರು

ಕಾದಂಬರಿಗಳಲ್ಲಿ ಬಿಂಬಿಸುತ್ತಾರೆ ತುಳುನಾಡಿನ ವಿವಿಧ ಜನಾಂಗಗಳಲ್ಲಿರುವ ಸಾಮಾಜಿಕ ಆಯಾಮವನ್ನು ಇಲ್ಲಿ ಗುರುತಿಸಿಕೊಳ್ಳಬಹುದು. ಜಾತಿ ಆಧಾರಿತ ಸಾಮಾಜಿಕ ವ್ಯವಸ್ಥೆಯನ್ನು ಗಮನದಲ್ಲಿಟ್ಟುಕೊಂಡು ಕಾದಂಬರಿಯ ವಿವರಗಳು ಪ್ರಕಟಗೊಳ್ಳುತ್ತಾ ಜನರನ್ನು ನಿಯಂತ್ರಿಸುವ ಶ್ರೇಣೀಕೃತ ಆಡಳಿತ ವ್ಯವಸ್ಥೆಯನ್ನು ಸುಧಾರಣೆಯನ್ನು ತರುವ ಪ್ರಯತ್ನವನ್ನು ಕಾದಂಬರಿಯ ಮೂಲಕ ಮಾಡಿಕೊಳ್ಳುವುದನ್ನು ಗಮನಿಸಬಹುದು. ಪ್ರೇಮ, ಪ್ರಣಯ, ಅಂತರ್‌ಜಾತೀಯ ವಿವಾಹಗಳ ವಿವರಗಳು ಕಾದಂಬರಿಯಲ್ಲಿ ಕಾಣುತ್ತೇವೆ. ತುಳುನಾಡಿನ ಸಾಮಾಜಿಕ ವ್ಯವಸ್ಥೆಯಡಿಯಲ್ಲಿ ಈ ವಿವರಗಳು ಅವಾಸ್ತವ ಎನಿಸಿದರೂ, ಲೇಖಕರು ಅವು ವಾಸ್ತವ ಅನಿಸಬೇಕು ಅನ್ನುವ ರೀತಿಯಲ್ಲಿ ಚಿತ್ರಿಸುತ್ತಾರೆ. ಸಮಕಾಲೀನ ಸಮಾಜದಲ್ಲಿರುವ ಸಮಸ್ಯೆಗಳನ್ನು ಇಲ್ಲಿ ಗುರುತಿಸುತ್ತಾರೆ. ಜಾತಿ, ಧರ್ಮವನ್ನು ಮೀರಿ ಜನ ಒಂದಾಗಬೇಕೆಂಬ ಆಶಯವನ್ನು ವ್ಯಕ್ತಪಡಿಸುತ್ತಾರೆ. ಜಾತಿವಾದಿ, ಕೋಮುವಾದಿ ಶಕ್ತಿಗಳು ಹೆಚ್ಚುತ್ತಿರುವ ಸಮಾಜದಲ್ಲಿ ಸೌಹಾರ್ದತೆಯ ವಾತಾವರಣವನ್ನು ಉಂಟು ಮಾಡುವ ಸದಾಶಯಗಳು ಕಾದಂಬರಿಯುದ್ದಕ್ಕೂ ಬಳಕೆಯಾಗಿವೆ.

ತುಳುನಾಡಿನ ಸಮಾಜದ ಅನೇಕ ಪ್ರಾದೇಶಿಕ ಆಚರಣೆಗಳು ಇಲ್ಲಿ ದಾಖಲುಗೊಂಡಿದೆ. ಈ ಆಚರಣೆಗಳಲ್ಲಿ ಸಾಮಾಜಿಕ ಸಮೃದ್ಧಿಯನ್ನು ಕಾಣಬಹುದು. ಪ್ರಸ್ತುತ ಸಂದರ್ಭದಲ್ಲಿ ಇಲ್ಲಿ ಹೇಳುವ ವಿಚಾರಗಳೆಲ್ಲಾ ಸ್ಥಿತ್ಯಂತರಗೊಂಡಿವೆ. ಇಲ್ಲದೇ ಇರುವ ಸಾಮಾಜಿಕ ಸಂಬಂಧಗಳ ದಾಖಲೆ ಇಲ್ಲಿ ಆಗಿದೆ. ಆಧುನಿಕರಣದ ಪ್ರಭಾವದಿಂದ ಮಾನವೀಯ ಸಂಬಂಧಗಳು ಶಿಥಿಲಗೊಂಡಿರುವ ಸಂದರ್ಭದಲ್ಲಿ ಇಲ್ಲಿಯ ವಿಚಾರಗಳು ಮುಖ್ಯವಾಗುತ್ತದೆ. ಗತಕಾಲದ ತುಳುನಾಡಿನ ಸಾಮಾಜಿಕ ಸ್ವರೂಪದ ವ್ಯಾಖ್ಯಾನವೂ ಹೌದು. ಯಾಕೆಂದರೆ ಇಲ್ಲಿ ಹೇಳುವ ಅನೇಕ ವಿಚಾರಗಳು ಈಗಿನ ತುಳುನಾಡ ಸಂಸ್ಕೃತಿಯಲ್ಲಿ ಕಣ್ಮರೆಗೊಂಡಿವೆ. ಎಂದು ಹೇಳಿದರೆ ತಪ್ಪಾಗಲಾರದು. ಒಟ್ಟಿನಲ್ಲಿ ಹೇಳುವುದಾದರೆ ತುಳುನಾಡಿನ ಸಾಮಾಜಿಕ ಸ್ವರೂಪವನ್ನು ಪುನಾ ರಚಿಸುವಲ್ಲಿ ಈ ಎಲ್ಲಾ ವಿವರಗಳು ಮುಖ್ಯವಾಗಬಹುದು. ತುಳುಭಾಷೆ ಮತ್ತು ಸಂಸ್ಕೃತಿಯನ್ನು ಕನ್ನಡೀ ಕರಿಸಿದ್ದನ್ನು ಇಲ್ಲಿ ಗುರುತಿಸಬಹುದು.

### ೩.೧ ನಂಬಿಕೆಗಳು ಮತ್ತು ಆಚರಣೆಗಳು:

ನಂಬಿಕೆ ಮತ್ತು ಆಚರಣೆಗಳ ನೆರಳಿನಲ್ಲಿಯೇ ತುಳುವರು ಬೆಳೆದುಕೊಂಡು ಬಂದವರು. ಸಾಮಾಜಿಕ ಜೀವನದ ಒಂದು ಅಂಗವಾಗಿ ಇವು ಪ್ರಮುಖ ಪಾತ್ರವಹಿಸಿದೆ. ಸಾಮಾಜಿಕ ಹಾಗೂ ಧಾರ್ಮಿಕ ನಂಬಿಕೆ ಮತ್ತು ಆಚರಣೆಗಳೆರಡರಲ್ಲಿಯೂ ಇಲ್ಲಿನ ಜನರು ತೊಡಗಿಸಿಕೊಂಡವರು. ಅತ್ಯಂತ ಧಾರ್ಮಿಕ ನಂಬಿಕೆಗಳು ತುಳುನಾಡಿನಲ್ಲಿ ಕಂಡುಬರುತ್ತವೆ. ಧಾರ್ಮಿಕ ಇತಿಹಾಸವನ್ನು ಪುನಾರಚಿಸುಲ್ಲಿ ತುಳುನಾಡಿನ ಪಾತ್ರ ಹಿರಿದಾದುದು. ಯಾಕೆಂದರೆ ತುಳುನಾಡಿನ ಧಾರ್ಮಿಕ ಇತಿಹಾಸವೂ ಸಮೃದ್ಧ ಮತ್ತು ವೈವಿಧ್ಯಮಯವಾದ ಆಕರಗಳನ್ನು

ಹೊಂದಿದೆ. ಆ ಮೂಲಕ ಇಡೀ ದೇಶಕ್ಕೆ ಸರ್ವಧರ್ಮ ಸಮನ್ವಯತೆಯ ಆದರ್ಶವನ್ನು ಎತ್ತಿ ತೋರಿಸಿದೆ. ಅನಾದಿಕಾಲದಿಂದಲೂ ಪ್ರಾದೇಶಿಕವಾಗಿ ತನ್ನದೇ ಆದ ಧಾರ್ಮಿಕ ನೆಲೆಗಟ್ಟೊಂದನ್ನು ಹಾಕಿಕೊಂಡಿದೆ. ಇಲ್ಲಿನ ಸಮಾಜದ ತಾತ್ವಿಕ ಮತ್ತು ಸಾಮಾಜಿಕ ಚೌಕಟ್ಟು ವಾಸ್ತವವಾಗಿ ರೂಪುಗೊಂಡಿರುವುದು ಧಾರ್ಮಿಕ ಆಚರಣೆಗಳ ಮೂಲಕ ನಂಬಿಕೆಗಳು ಮತ್ತು ಆಚರಣೆಗಳು ಒಂದಕ್ಕೊಂದು ಪೂರಕವಾಗಿ ಜನರ ಮನದಾಳದಲ್ಲಿ ಉಳಿದುಕೊಂಡು ಬಂದಿವೆ. ಹಿಂದಿನಿಂದಲೂ ಮಾನವತೀತ ಶಕ್ತಿಗಳ ಬಗ್ಗೆ ರೂಢಮೂಲವಾದ ನಂಬಿಕೆಗಳಿದ್ದವು. ಇಂತಹ ನಂಬಿಕೆಗಳಿಗೆ ಅನುಗುಣವಾಗಿ ಆಚರಣೆಗಳನ್ನು ಮಾಡಲಾಯಿತು. ಹೀಗೆ ಕಾಲಕ್ರಮೇಣ ಜೀವನವೂ ಕೂಡ ಆಚರಣಾತ್ಮಕ ಪರಿವರ್ತನೆಯನ್ನೂ ಪಡೆಯುತ್ತಾ ಬಂತು.

ಪ್ರಸ್ತುತ ನೀರ್‌ಮಾರ್ಗರವರು ತಮ್ಮ ಕಾಂದಬರಿಗಳಲ್ಲಿ ನಂಬಿಕೆಗಳು ಮತ್ತು ಆಚರಣೆಗಳನ್ನು ಸಾಮಾಜಿಕ ಮತ್ತು ಧಾರ್ಮಿಕ ಎಂಬ ಎರಡೂ ಆಯಾಮಗಳಲ್ಲಿ ಗುರುತಿಸಿಕೊಳ್ಳುತ್ತಾರೆ. ಮಾನವ ನಿರಾಂತಕವಾದ ಬಾಳನ್ನು ನಡೆಸಲು ಕಂಡುಕೊಂಡ ಒಂದು ಹಾದಿ ನಂಬಿಕೆ ಎನ್ನಬಹುದು. ನಂಬಿಕೆ ಅಂತರಂಗದ ನೆಲೆಯಾದರೆ ಅದನ್ನು ಪೋಷಿಸುವ ಆಚರಣೆ ಬಹಿರಂಗದ ವಿಚಾರವಾಗುತ್ತದೆ. ಅಂತರಂಗ ಮತ್ತು ಬಹಿರಂಗದ ಕ್ರಿಯೆಯ ಮೂಲಕ ಒಂದು ರೀತಿಯ ಸಮತೋಲನದ ಚಿತ್ತವೃತ್ತಿಯನ್ನು ಕಂಡುಕೊಳ್ಳಲು ಮನುಷ್ಯರು ಮಧ್ಯಮ ಜಗತ್ತಿನ ಶಕ್ತಿಗಳನ್ನು ಪಾತ್ರಿಯ ಮೂಲಕ ಆವಾಹಿಸಿಕೊಳ್ಳುವ ಮತ್ತು ಆ ಮುಲಕ ಸಾಂತ್ವನವನ್ನು ಕಂಡುಕೊಳ್ಳುವ ಸಾಹಸವನ್ನು ಮಾಡಿದರು. ದೈವಕ್ಕೆ ನಡೆಸುವ ಉತ್ಸವಾದಿಗಳು ನೇರವಾಗಿ ಮನುಷ್ಯರಿಗೂ ದೈವಕ್ಕೂ ಸಂಬಂಧ ಪಟ್ಟವುಗಳೇ ಆಗಿರುತ್ತದೆ. ದೇವಾಲಯಗಳಲ್ಲಿ ನಡೆಯುವ ವಾರ್ಷಿಕ ರಥೋತ್ಸವವು ಧಾರ್ಮಿಕ ಕಟ್ಟಳೆಗಳನ್ನು ತಿಳಿಸುವುದರೊಂದಿಗೆ ಸ್ಥಳೀಯ ಸಾಮಾಜಿಕ ಕಟ್ಟುಕಟ್ಟಳೆಗಳನ್ನು ಅರಿತುಕೊಳ್ಳುವ ಮುಖ್ಯ ಸಾಧನಗಳಲ್ಲಿ ಒಂದಾಗಿದೆ. ಧಾರ್ಮಿಕ ಜೀವನದ ದೈನಂದಿನ ಕ್ರಮ, ಧಾರ್ಮಿಕ ತತ್ವಗಳು, ಉತ್ಸವ ವರ್ಣನೆಗಳನ್ನು ತಿಳಿಯುವ'ಲ್ಲಿ ಸಹಾಯಕವಾಗುತ್ತದೆ. ತುಳುವರ ವಿಶಿಷ್ಟ ಸುಸಂಸ್ಕೃತ ಆರಾಧನೆಗಳು ಆಚರಣೆಗಳು, ನಂಬಿಕೆ, ನಡವಳಿಕೆಗಳು, ಸಂಪ್ರದಾಯಗಳಿಗೆ ತನ್ನದೇ ಆಶ ಐತಿಹ್ಯ ದಂತಕತೆಗಳಿವೆ ಒಟ್ಟಿನಲ್ಲಿ ಅಪೂರ್ವವಾದ ಸಂಸ್ಕೃತಿಯೊಂದನ್ನೂ ತುಳುನಾಡು ಹೊಂದಿದೆ ದೇಶ ವಿದೇಶಗಳ ಜನರನ್ನು ಬೆರಗುಗೊಳಿಸುವ ಇನ್ನೆಲ್ಲಿಯೂ ಇಲ್ಲದ ಆಚರಣೆಗಳು, ನಂಬಿಕೆಗಳು ಆರಾಧನೆಗಳು ನಮ್ಮಲ್ಲಿ "ತುಳುನಾಡು ದೈವ ಭೂತಗಳ ನೆಲೆವೀಡು. ಇಲ್ಲಿ ದೇವರುಗಳಿಗಿಂತ ದೈವಗಳದೇ ಕಾರುಬಾರು. ಒಂದೊಂದು ಮನೆತನಕ್ಕೂ ಒಂದೊಂದು ದೈವ ಒಂದೊಂದು ಮನೆಗೂ ಒಂದು ಭೂತ. ಹಾಗಾಗಿ ಈ ದೈವ ಭೂತಗಳು ತುಳುವರ ಸಾಮಾಜಿಕ ಬದುಕನ್ನು ಸಂಪೂರ್ಣವಾಗಿ ನಿಯಂತ್ರಿಸುತ್ತಿದ್ದವು. ದೈವಾರಾಧನೆಯೇ ತುಳುವರಿಗೆ ಒಂದು ಮನೋರಂಜನೆಯಾಗಿ,

ಸಾಂಸ್ಕೃತಿಕ ಕ್ರಿಯೆಯಾಗಿತ್ತು. ಹಾಗೆಯೇ ಊರಿಗೊಂದು ದೇವರು, ದೇವಸ್ಥಾನ ಇಲ್ಲಿನ ಜನರ ದೈವ ಭಕ್ತಿಗೆ ಇದು ಸಾಕ್ಷಿಯಾಗಿತ್ತು. ಆದರೂ ಇವರಿಗೆ ದೇವರುಗಳಿಗಿಂತ ಅಪಾರ ಭಕ್ತಿ ದೈವಗಳಲ್ಲಿ. ತಪ್ಪು ಮಾಡಿದಾಗ ದೇವರುಗಳು ಕ್ಷಮಿಸಿದರೂ ಈ ದೈವಗಳು ಬಿಡುವುದಿಲ್ಲ. ತಪ್ಪಿಗೆ ಪ್ರಾಯಶ್ಚಿತವಾಗದೆ ದೈವಗಳ ಕೋಪ ತಣಿಯದು. ಹೀಗೆ ಈ ದೈವಗಳು ಒಂದು ರೀತಿಯ ಸ್ವಯಂ ಸಾಮಾಜಿಕ ನಿಯಂತ್ರಕರಾಗಿ ಸತ್ಯಯವನ್ನು ಪ್ರತಿಪಾದಿಸುವಲ್ಲಿ ಯಶಸ್ವಿಯಾಗಿದ್ದವು. ಹಾಗೂ ಜನರಲ್ಲಿ ಭಯಭಕ್ತಿ ಹುಟ್ಟಿಸುತ್ತಿದ್ದವು.” (ಮಂಗಳೂರು ಕ್ರಾಂತಿ: ೨೦೦೬, ೪೧) ಇಲ್ಲಿ ತುಳುವರಿಗೆ ದೈವಗಳ ಮೇಲೆ ಇದ್ದ ನಂಬಿಕೆಗಳು, ಅವರ ಬದುಕನ್ನು ನಿಯಂತ್ರಿಸುವ ದೈವಗಳ ಸಮಾಧಾನಕ್ಕೆ ಮಾಡುವ ಕ್ರಿಯಾದಿ ಆಚರಣೆಗಳು ಎಷ್ಟು ಸದ್ಭಕ್ತಿಯಿಂದ ಕೂಡಿತ್ತು ಎನ್ನುವುದನ್ನು ತಿಳಿಯಬಹುದು. ದೈವ-ದೇವರುಗಳು ಮುನಿಸಿಕೊಂಡರೆ ಮನುಷ್ಯರಿಗೆ ಉಳಿಗಾಲವಿಲ್ಲ ಎಂಬ ದೃಢವಾದ ನಂಬಿಕೆ ತುಳುವರಲ್ಲಿ ಬೇರೂರಿತ್ತು. ಆದ್ದರಿಂದ ದೈವ ದೇವರುಗಳನ್ನು ಒಲಿಸಿಕೊಳ್ಳುವಲ್ಲಿ ತಾಮಸ ಮತ್ತು ಸಾತ್ವಿಕ ಕಳೆಯ ಆಚರಣೆಗಳನ್ನು ಮಾಡುತ್ತಿದ್ದರು. ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ವರ್ಷಕ್ಕೊಮ್ಮೆ ದೈವಗಳಿಗೆ ಕೋಲ ಕೊಡುವುದು, ನೇಮನಡೆಸುವುದು ವಾಡಿಕೆಯಾಗಿತ್ತು.

ತುಳುನಾಡಿನ ವಿವಿಧ ಜನಾಂಗಗಳ ನಂಬಿಕೆ ಮತ್ತು ನಡವಳಿಕೆಗಳು ‘ಮಾದಿರ’ ಕಾದಂಬರಿಯಲ್ಲಿ ಚಿತ್ರಿಸಲ್ಪಟ್ಟಿವೆ. ಈ ಕಾದಂಬರಿಯ ನಾಯಕಿ ಮಾದಿರ. ಇವಳ ಹುಟ್ಟಿನ ಬಗೆಗೆ ಅಲೌಕಿಕ ಹಿನ್ನೆಲೆಯಿದೆ. ಈಕೆ ಪಂಜುರ್ಲಿ ಭೂತದ ಕಾರ್ಣಿಕದಿಂದ ಜನಿಸಿದಳು. ಎಂಬುದರ ಬಗ್ಗೆ ಇಲ್ಲಿ ನಂಬಿಕೆಯಿದೆ. ಮಾದಿರ ಕಾದಂಬರಿಯ ಆರಂಭದಲ್ಲಿ ಬರುವ ಚಿತ್ರಣವನ್ನು ಗಮನಿಸಿದಾಗ ನಂಬಿಕೆ ಮತ್ತು ಆಚರಣೆಗಳು ಜನರ ಬದುಕಿನಲ್ಲಿ ಎಷ್ಟೊಂದು ಗಾಢವಾಗಿತ್ತು ಎನ್ನುವುದನ್ನು ತಿಳಿಯಬಹುದು. ಮಾದಿರ ವೇಷವನ್ನು ಹಾಕುತ್ತಾ ಮನೆ ಮನೆಗೆ ಬರುತ್ತಾ ಪಾಡ್ದನ ಹಾಡುವಲ್ಲಿ ನಂಬಿಕೆ ಮತ್ತು ಆಚರಣೆಗಳು ಉದ್ದೇಶ ಸ್ಪಷ್ಟವಾಗುತ್ತದೆ. ಇಲ್ಲಿ ಮಾದಿರಳ ತಂದೆ ಚೋಮ ಮಾದಿರಳ ಕೈ ಹಿಡಿದು ಹೇಳುವ ಪಾಡ್ದನ ಈ ರೀತಿಯಾಗಿದೆ. “ಈ ಮಾಯದ ಹುಡುಗಿ ‘ನನ್ನ ಮನೆಯ ಬಂಗಾರದ ಕಲಶ’ ಪಂಜುರ್ಲಿ ಭೂತದ ವರ ಮನುಷ್ಯ ದೃಷ್ಟಿ ನಮ್ಮದು, ಮಾಯದ ದೃಷ್ಟಿ ದೈವದ್ದು. ಸ್ವಾಮಿಯ ಅಪ್ಪಣೆ ದೊಡ್ಡದು, ಬ್ರಹ್ಮ ಲಿಪಿ ಮಣ್ಣಿನ ಭೋಗ, ದೈವದ ಕಳೆ ಮದಿಪಿನ ಬಲ ಇವೆಲ್ಲಾ ಸೂರ್ಯ ಚಂದ್ರರ ಕಾಲದಿಂದ ಬಂದಿರುವಂತಹುದ್ದು. ಹೆಣ್ಣು ಮಗು ಹುಟ್ಟಿದರೆ ಮಾದಿರ ವೇಷ ಹಾಕಿಸಿ ಹತ್ತು ಮನೆಗೆ ಹೋಗಿ ಮಾದಿರ ನಲಿಕೆ ಮಾಡಿಸಿ ಭಿಕ್ಷೆ ಪಡೆಯುತ್ತೇನೆ ಎಂದು ಹರಕೆ ಹೊತ್ತಿದ್ದೆ. ದೈವ ದೇವರ ಸಹಾಯದಿಂದ ಅದು ನಿಜವಾಯಿತು.........”(ಮಾದಿರ; ೨೦೦೭,೪)

ಚಂದುಗುರಿಕಾರನ ಮಗಳಿಗೆ ಮದುವೆಗೆ ಸಂಬಂಧಗಳು ಕೂಡಿ ಬರದೇ ಇದ್ದಾಗ,

ಆತನ ಮಡದಿ ಬೊಮ್ಮಿ ಸಂಬಂಧ ಕೂಡಿಬರುವಂತೆ 'ಕೋಲ ಬಲಿ' ಹರಕೆ ಹೇಳುವುದು ಮದುವೆ ನಡೆದು ಹರಕೆಯನ್ನು ಆರ್ಥಿಕ ಅಡಚಣೆಯಿಂದ ನೇರವೇರಿಸಲು ಸಾಧ್ಯವಾಗುವುದಿಲ್ಲ. ಅದೇ ಸಮಯಕ್ಕೆ ಶಶಿಕಲಾ ಅನಾರೋಗ್ಯ ಪೀಡಿತಳಾದಾಗ ಇದು ಭೂತ ಪ್ರೇತದ ಭಾದೆಯೆಂದು ಪಂಡಿತರ ಬಳಿಗೆ ನಂತರ ಪರಿಹಾರಕ್ಕಾಗಿ ಕೋಲ ಬಲಿ ಕೊಡುತ್ತಾರೆ. ಈ ರೀತಿಯ ಮಾನಸಿಕ ನಂಬಿಕೆಗಳು ಜನರನ್ನು ಆಚರಣೆಯಲ್ಲಿ ತೊಡಗುವಂತೆ ಮಾಡುವ ಅನೇಕ ಪ್ರಮೇಯ ಕಾದಂಬರಿಗಳಲ್ಲಿ ಕಂಡುಬರುತ್ತದೆ. ಯಾವುದೇ ರೋಗ ರುಜಿನಗಳು ಸಂಭವಿಸಿದಾಗಲೂ ಅದಕ್ಕೆ ತುಳುವರು ಪ್ರತಿಕ್ರಿಯಿಸುವ ಬಗೆ ವಿಶಿಷ್ಟವಾದುದು.

### ೩.೨ ಪ್ರದರ್ಶನ ಕಲೆಗಳು ಮತ್ತು ಆಚರಣೆಗಳು:

ಅನುಭವ, ಅನುಕರಣೆ, ಲೋಕಾನುಭವಗಳಿಂದ ಕೂಡಿದ ಜನಪದ ಕುಣಿತಗಳೆಲ್ಲವೂ ಪ್ರದರ್ಶನ ಕಲೆಗಳಲ್ಲಿ ಕೂಡಿಕೊಳ್ಳುತ್ತವೆ. ನಿರ್ದಿಷ್ಟ ಉದ್ದೇಶವನ್ನು ಇಟ್ಟುಕೊಂಡು ಸಾಹಿತ್ಯ, ಸಂಗೀತ, ಹೆಜ್ಜೆಗಾರಿಕೆ, ಹಿಮ್ಮೇಳಗಳ ಸಮ್ಮಿಶ್ರಣದೊಂದಿಗೆ ಜನಪದ ಕುಣಿತಗಳಿರುತ್ತವೆ. ತುಳುನಾಡಿನ ಸಂಸ್ಕೃತಿಯನ್ನು ಪ್ರತಿಬಿಂಬಿಸುವಲ್ಲಿ ಆರಾಧನಾ ಕ್ಷೇತ್ರಗಳ ಪಾತ್ರ ಒಂದೆಡೆಯಾದರೆ ಪ್ರದರ್ಶನ ಕಲೆಗಳು ಮತ್ತು ಆಚರಣೆಗಳ ಪಾತ್ರ ಇನ್ನೊಂದೆಡೆ. ಪ್ರಾದೇಶಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ, ತನ್ನದೇ ವೈಶಿಷ್ಟ್ಯವನ್ನು ಪಡೆದ ತುಳುನಾಡಿನಲ್ಲಿ ವಿವಿಧ ಜನಪದ ಕುಣಿತಗಳು ಮತ್ತು ಆಚರಣೆಗಳು ಕಂಡುಬರುತ್ತದೆ. ಪ್ರದರ್ಶನ ಕಲೆಗಳು ಮತ್ತು ಆಚರಣೆಗೆ ಸಂಬಂಧ ಪಟ್ಟಂತೆ ಇಲ್ಲಿ ನೀರ್ ಮಾರ್ಗರವರ 'ಮದಿಪು' ಮತ್ತು 'ಮಾದಿರ' ಕಾದಂಬರಿಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿದ್ದೇನೆ. ಈಗಾಗಲೇ ಪ್ರಸ್ತಾಪಿಸಿದಂತೆ 'ಮಾದಿರ' ಎನ್ನುವ ಹೆಸರೇ ಪ್ರದರ್ಶನ ಕಲೆಗಳಿಗೆ ಸಂಬಂಧ ಪಟ್ಟ ಪದ. ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್ ಅವರು ಇದನ್ನು ಕುಟುಂಬ ಸಂಬಂಧೀ ಕುಣಿತ ಎಂದು ಕರೆಯುತ್ತಾರೆ. "ನಲಿಕೆಯವರು ಅಥವಾ ಪಾಣಾರರು ಕಾರ್ಕಳ ಪ್ರದೇಶದಲ್ಲಿ ನಡೆಸುವ ಮಾಯಿದ ಪುರುಷೆರ್, ಇತರ ಕಡೆಗಳಲ್ಲಿ ನಡೆಸುವ ಮಾದಿರ, ಸೋಣದ ಮದಮಲ್, ಕೀಲು ಕುದುರೆ ಕುಣಿತವು ಕೂಡ ಕುಟುಂಬ ಸಂಬಂಧಿ ಕುಣಿತಗಳು" (ಡಾ। ಪಾಲ್ತಾಡಿ ರಾಮಕೃಷ್ಣ ಆಚಾರ್: ಸಂವಹನ ಮಾಧ್ಯಮವಾಗಿ ಜನಪದ ಕುಣಿತಗಳು; ೧೯೯೯, ೬೯)

ಮಾದಿರ ಕುಣಿತದ ಬಗ್ಗೆ ಡಾ.ಬಿ.ಎ.ವಿವೇಕರೈಯವರು ತಮ್ಮ 'ತುಳು ಜನಪದ ಸಾಹಿತ್ಯ' ಗ್ರಂಥದಲ್ಲಿ ವಿವರಿಸಿದ ಬಗೆ ಈ ರೀತಿಯಾಗಿದೆ. 'ತುಳು ಜನಪದ ಸಾಹಿತ್ಯದ' ಕುಣಿತದ ಹಾಡುಗಳು ಪ್ರಧಾನವಾಗಿ ಇಲ್ಲಿ ಮೂಲನಿವಾಸಿಗಳು ಎನ್ನಿಸಿಕೊಂಡಿರುವ ಹರಿಜನರ ಬೇರೆ ಬೇರೆ ವರ್ಗಗಳಿಗೆ ಸಂಬಂಧಿಸಿದವುಗಳು. ತುಳುನಾಡಿನಲ್ಲಿ ಇಂದಿಗೂ ಅವರ ಮದುವೆ, ಹಬ್ಬದಂತಹ ಸಂದರ್ಭಗಳಲ್ಲಿ ಹಾಡು ಹೇಳಿಕೊಂಡು ಕುಣಿಯುವುದನ್ನು ಕಾಣಬಹುದು. ಇವರಲ್ಲಿ 'ನಲಿಕೆಯವರು' ಎಂಬ ಪಂಗಡದವರು ಇದ್ದಾರೆ. ಹೆಸರೇ ಸೂಚಿಸುವಂತೆ 'ನಲಿಕೆ'

(=ಕುಣಿತ)ಯೇ ಕಸುಬಾಗಿ ಉಳ್ಳವರು 'ನಲಿಕೆಯವರು' ........ ನಲಿಕೆಯವರ ಹೆಣ್ಣು ಮಗಳು ಮನೆ ಮನೆಗೆ ಬಂದು ಕುಣಿದು ಹಾಡಿ, ಮನೆಯವರು ಕೊಟ್ಟ ವಸ್ತು, ಹಣ– ಇವುಗಳಿಂದ ಸಂತೃಪ್ತರಾಗುತ್ತಿದ್ದರು. ಇಂದು ಇಂತಹ ಕುಣಿತ ಮತ್ತು ಅದಕ್ಕೆ ಸಂಬಂಧಸಿದ ಹಾಡುಗಳು ಕಾಣಸಿಗುವುದು. ಬಹಳ ಅಪೂರ್ವ" ( ಡಾ। ಬಿ.ಎ. ವಿವೇಕ ರೈ: ತುಳು ಜನಪದ ಸಾಹಿತ್ಯ; ೧೯೮೫, ೨೭೩) ಎನ್ನುವ ಅವರ ವಿಚಾರಗಳಲ್ಲಿ ಮಾದಿರ ಕುಣಿತದ ಸ್ವರೂಪವನ್ನು ಗಮನಿಸಬಹುದು. ಪ್ರದರ್ಶನ ಕಲೆಗಳಲ್ಲಿ ಒಂದಾದ 'ಮಾದಿರ' ಎಂಬೀ ಜನಪದ ಕುಣಿತ ತುಳುನಾಡಿನ ಸುಗ್ಗಿ ತಿಂಗಳಲ್ಲಿ ಕಂಡು ಬರುತ್ತದೆ. ಸುಗ್ಗಿಯ ಕೊಯಿಲು ಮುಗಿದು ಬೇಸಾಯದ ಕಾರ್ಯಗಳೆಲ್ಲಾ ಮುಗಿದ ಮೇಲೆ ಜನರು ತಮ್ಮ ಮನೆಗಳಲ್ಲಿ ಸಂಭ್ರಮ ಸಂತೋಷದಿಂದಿರುವಾಗ ಸುಗ್ಗಿ ಕುಣಿತ, ಸಿದ್ಧವೇಷ, ಮಾದಿರ, ಮಾಯಿದ ಪುರುಷೆರ್ ಮುಂತಾದ ಕುಣಿತಗಳು ಕಂಡುಬರುತ್ತವೆ. ಈ ಕುಣಿತಗಳಲ್ಲಿ ಹಾಡು, ಸಂಭಾಷಣೆ, ಕುಣಿತ ಅಭಿವ್ಯಕ್ತಿಯನ್ನು ಕಾಣಬಹುದು. ಕುಣಿತವನ್ನೇ ತಮ್ಮ ಪ್ರಧಾನ ಕಸುಬನ್ನಾಗಿಸಿಕೊಂಡ ನಲಿಕೆಯವರು ಮಾದಿರ ಕುಣಿತವನ್ನು ಕುಣಿಯುತ್ತಾರೆ. ಜಾನಪದ ಕುಣಿತದ ಕಥೊಂದನ್ನು ಆಧಾರವಾಗಿ ಇಟ್ಟುಕೊಂಡು 'ಮಾದಿರ' ಕಾದಂಬರಿ ರಚನೆಯಾಗಿದೆ. ಈ ಕಾದಂಬರಿಯ ಮೂಲಕ ನೀರ್‌ಮಾರ್ಗರವರು ಮಾದಿರ ಕುಣಿತ ಸ್ವರೂಪ ಆಶಯದೊಂದಿಗೆ ತುಳುನಾಡಿನ ಸಂಸ್ಕೃತಿಯನ್ನು ಚಿತ್ರಿಸುತ್ತಾರೆ. ಒಂದೆರಡು ಗಂಡಸರು ಮತ್ತು ಏಳೆಂಟು ಹೆಂಗಸರ ಜತೆ ಸಿಂಗಾರ ಮಾಡಿಕೊಂಡು ಬಂದ ಹೆಣ್ಣು ಮಗಳೊಬ್ಬಳು ತುಳುವರರ ಮನೆ ಮನೆಗೆ ಹೋಗಿ ಕುಣಿಯುತ್ತಾಳೆ. ಗುಂಪಿನಲ್ಲಿ ಬಂದ ಒಬ್ಬ ವ್ಯಕ್ತಿ ತೆಂಬರೆ ಬಡಿದರೆ ಇನ್ನೊಬ್ಬಳು ಹಾಡುತ್ತಾಳೆ. ಈ ಹಾಡು ಮತ್ತು ಬಡಿತಕ್ಕೆ ಅನುಗುಣವಾಗಿ 'ಮಾದಿರ' ವೇಷದ ಹೆಣ್ಣು ಸೊಂಟ ಕುಲುಕಿಸುತ್ತಾ , ಕೈ ತಿರುಗಿಸುತ್ತಾ ಹೆಜ್ಜೆ ಹಾಕುತ್ತಾಳೆ. ಆ ಸಂದರ್ಭದಲ್ಲಿ ಹಾಡುವ ಹಾಡು ಈ ರೀತಿ ಇರುತ್ತದೆ.

"ಡೆನ್ನ। ಡೆನ್ನಾ....। ಡೆನ್ನಾನ ।
ಡೆನ್ನ। ಡೆನ್ನಾ....। ಡೆನ್ನಾನ ।
ಮಾದಿ। ರೊಂದು। ಮನ್ಪಿ। ನಾಳೆ। ಮಾ। ಪೊರ್‌ಳೆದಿ। ಮಾದಿ। ರಾ।
ಬೊಳ್ಳೆರಿ। ಚೆನ್ನಗೆ। ಆಡುವೆಂ। ದುಳ್ಳೆನೊ। ಮಾದಿ। ರಾ।
ಕಂಚಿ। ದನೇ। ತಟ್ಟು। ಗೊಡು। ಬಳಸೊ। ದುಂದುಳ್ಳನೆ। ಮಾದಿ। ರಾ।
ಎನನೆ। ಕೊನಪಿ। ಚೆನ್ನರೆ। ಮಗೆ। ಏರೆ। ನಾತೆಗೆ। ಉಳ್ಳೆ। ನೋ।
ಆಯು। ನಾತೇ। ಇಂಬ್ಯ। ನಾತೇ। ತಪ್ಪುದ। ಕುಂಟೋ। ದಾತೇ।
ತಪ್ಪುಲ। ಜಾಪಿ। ಕುಂಟ। ದಾತೇ। ಅರಿಲ। ಲಪ್ಪಿ। ಬಳ್ಳ। ದಾತೇ।
ಕೊಣಪೆ। ಂಡಲಾಕೊಣ। ವಡೆ। ಇನಿಯೆ। ಕೊಣ। ವಾಡೆ"

( ಮಾದಿರ; ೨೦೦೭ ,೩)

ಇದೇ ಹಾಡಿನ ಪಾಠಾಂತರಗಳಲ್ಲಿ ಒಂದನ್ನು ಕನ್ನಡಕ್ಕೆ ಅನುವಾದಿಸಿ ಡಾ। ವಿವೇಕ ರೈಗಳು ಈ ರೀತಿ ಕೊಡುತ್ತಾರೆ.

ಮಾದಿರ ಎಂಬವಳು ಬಲು ಚೆಲುವೆ-ಮಾದಿರ
ಬೊಳ್ಳೆರಿ ಚೆನ್ನನನ್ನು ಮದುವೆಯಾಗುವೆಯಾ ಮಾದಿರ?
ಕಂಚಿನ ಸಟ್ಟುಗದಲ್ಲಿ ಬಡಿಸಬೇಕೆಂದಿರುವೆಯಾ ಮಾದಿರ?
ನನ್ನನ್ನು ಕೊಂಡೊಯ್ಯುವ ಚೆನ್ನೆಯರ ಮಗ ಯಾರಷ್ಟು ಎತ್ತರ ಇದ್ದಾನೆ.?
ಅವನಷ್ಟು, ಇವನಷ್ಟು, ಸೊಪ್ಪಿನ ಗೂಟದಷ್ಟು
ಸೊಪ್ಪು ಇಳಿಸುವ ಗೂಟದಷ್ಟೇ, ಅಕ್ಕಿ ಅಳೆಯುವ ಸೇರಿನಷ್ಟೇ
ಒಯ್ಯುವವನಾದರೆ ಒಯ್ಯಲಿ, ಈ ಹೊತ್ತೇ ಒಯ್ಯಲಿ.
(ಡಾ। ಬಿ.ಎ. ವಿವೇಕ ರೈ: ತುಳು ಜನಪದ ಸಾಹಿತ್ಯ ; ೧೯೮೫, ೨೭೩)

ಈ ಹಾಡಿನಲ್ಲಿ ಪ್ರೇಮ ಕತೆಯೊಂದು ಅಡಕವಾಗಿದೆ. ಈ ಹಾಡಿನ ಹಿನ್ನೆಲೆಯಲ್ಲಿಯೇ 'ಮಾದಿರ' ಕಾದಂಬರಿ ರಚನೆಯಾಗಿದೆ. ಮೇಲಿನ ಹಾಡಿನಲ್ಲಿ ತಿಳಿಸಿದಂತೆ 'ಮಾದಿರ' ಓರ್ವಳು ಸುರದ್ರೂಪಿ ಹೆಣ್ಣು. ಕಾದಂಬರಿಯಲ್ಲಿ ನಲಿಕೆ ಜನಾಂಗಗಕ್ಕೆ ಸೇರಿದ ಚೊಮ ಮತ್ತು ಗುಲ್ಲಿ ದಂಪತಿಗಳ ಮಗಳಾಗಿ ಮಾದಿರ ಇರುತ್ತಾಳೆ. ಈಕೆಗೆ ಮಾದಿರ ಎಂಬ ಹೆಸರಿಡುವುದನ್ನು ಕಾರಣವಿದೆ. ಅದನ್ನು ಮಾದಿರಳ ತಾಯಿ ಕುಣಿತದ ಬಳಿಕ ಜನರಲ್ಲಿ ಹೇಳುತ್ತಾಳೆ.

ಮಾದಿರ ಕುಣಿತದಲ್ಲಿ ಮಾದಿರ ಕುಣಿಯುತ್ತಿದ್ದ ಹಾಗೆ ಆಕೆಯ ಜೊತೆಗೆ ಬಂದ ಹೆಂಗಳೆಯರು ಆಕೆಯ ಸುತ್ತ ಕುಣಿಯುತ್ತಾರೆ. ಮಾದಿರ ಹಾಡು ಮುಗಿದ ಬಳಿಕ ಆ ಹೆಂಗಳೆಯರು ಸುತ್ತು ಬರುತ್ತಾ ಕೋಲಾಟ ಆಡುತ್ತಾರೆ. ನಂತರ ಬೇರೆ ಬೇರೆ ಕಸರತ್ತುಗಳನ್ನು ಮಾಡಿ ಮನೆಯವರ ಮನವನ್ನು ಮಾದಿರ ಗೆಲ್ಲುತ್ತಾಳೆ. ನಂತರ ಅಲ್ಲಿದ್ದ ಹಿರಿಯರ ಹೆಂಗಸರ ಕಾಲಿಗೆ ಬಿದ್ದು ಆಶೀರ್ವಾದವನ್ನು ಬೇಡಿಕೊಳ್ಳುತ್ತಾಳೆ. ಇದು ಕುಣಿತದ ಕ್ರಮವಾಗಿದೆ. ಕಾದಂಬರಿಯಲ್ಲಿ ತಿಳಿಸಿದಂತೆ ಮಾದಿರ ಆಕೆಯ ತಂದೆ ತಾಯಿಗಳಿಗೆ ಹರಕೆಗೆ ಹುಟ್ಟಿದ ಕೂಸು. ಈಕೆ ಪಂಜುರ್ಲಿಭೂತದ ವರವೆಂದು ಹೇಳುತ್ತಾರೆ. ದಂಪತಿಗಳು ಮಕ್ಕಳಾಗಲಿಲ್ಲವೆಂದು ಕೊರಗಿನಿಂದ ಹರಕೆ ಹೇಳಿ ಗಂಡು ಮಗುವಾದರೆ ಆಟಿ ಕಳೆಂಜ, ಹೆಣ್ಣು ಮಗುವಾದರೆ ಮಾದಿರ ನಲಿಕೆ ಕುಣಿಸಿ ಆ ಮಗುವಿನಿಂದ ಹತ್ತು ಮನೆಗಳಿಂದ ಭಿಕ್ಷೆ ಪಡೆಯುತ್ತೇವೆಂಬ ಹರಕೆಯಂತೆ ಕುಣಿಯುವುದು ಮಾದಿರ ಕುಣಿತದ ಆಶಯವಾಗಿರುತ್ತದೆ. ಮಾದಿರ ಕುಣಿತವಾದ ಮೇಲೆ ಮಾದಿರ ಪ್ರತೀ ಮನೆಯಿಂದಲೂ ಅವರು ತಮ್ಮ ಶಕ್ತ್ಯಾನುಸಾರ ಕೊಡುವ ಭಿಕ್ಷೆಯನ್ನು ಪಡೆಯುತ್ತಾಳೆ. ಮಾದಿರ ತನ್ನ ಸೆರಗನ್ನು ಹಿಡಿದು ಮುಂದೆ ಬಂದಾಗ ಮನೆಯ ಹೆಂಗಸರು ಅವಳ ಸೆರಗಿಗೆ ಅಕ್ಕಿಯನ್ನು ಸುರಿಯುತ್ತಾರೆ. ಅದಲ್ಲದೆ ಬಗೆ ಬಗೆಯ ಧಾನ್ಯಗಳನ್ನು ದುಡ್ಡನ್ನು ಕೊಡುತ್ತಾರೆ.

ಮಾದಿರ ಕುಣಿತದ ಮೂಲಕ ಜನಪದರು ತುಳುನಾಡಿನ ಹೆಂಗಸರು ವಾತ್ಸಲ್ಯ ಪೂರ್ಣ ಹೃದಯಿಗಳು ಎಂಬುವುದನ್ನು ತೋರಿಸುತ್ತದೆ. ತಮ್ಮ ಶಕ್ತ್ಯಾನುಸಾರ ಮಾದಿರಾಳಿಗೆ ವಸ್ತುಗಳನ್ನು ಕೊಟ್ಟು ಗೌರವಿಸುವುದು ಪದ್ಧತಿ. ಸಮಾಜದ ಜನರ ನಂಬಿಕೆ ಸಂಪ್ರದಾಯ, ಮೌಲ್ಯಗಳನ್ನು ಎತ್ತಿ ತೋರಿಸುತ್ತದೆ. ಮಕ್ಕಳ ಮೇಲಿನ ಮಮತೆಯಿಂದ ಹರಕೆ ಹೇಳಿ ಕೊಳ್ಳುವುದು, ಆ ಹರಕೆಯನ್ನು ಸಂದಾಯ ಮಾಡುವುದು – ಇಂತಹ ವಿಚಾರಗಳು ಮಾದಿರ ಕುಣಿತಗಳಲ್ಲಿ ಮಾತ್ರವಲ್ಲದೆ, ಇತರ ಜಾನಪದ ಕುಣಿತಗಳಲ್ಲೂ ಕಂಡುಬರುತ್ತದೆ. ಆ ಮೂಲಕ ಇವು ತುಳುನಾಡಿನಲ್ಲಿ ಪ್ರದರ್ಶನ ಕಲೆಗಳಾಗಿ ರೂಪುಗೊಂಡಿವೆ. ವ್ಯಕ್ತಿಯೋರ್ವ ತನ್ನ ಭಾವನೆಗಳನ್ನು ಪ್ರಸ್ತುತ ಪಡಿಸಲಿರುವ ಮಾಧ್ಯಮವಾಗಿಯೂ ಕುಣಿತಗಳಿರುತ್ತವೆ. ಎಂಬುದನ್ನು ನೀರ್‌ಮಾರ್ಗರವರು ಇಂತಹ ಪ್ರದರ್ಶನ ಕಲೆಗಳ ಬೇರೆ ಬೇರೆ ಸಂದರ್ಭಗಳಲ್ಲಿ ತಿಳಿಸುತ್ತಾರೆ. ನಿರ್ದಿಷ್ಟವಾದ ಕಾಲ, ಸ್ಥಳ, ಆವರಣ, ಪರಿಸರಗಳಲ್ಲಿ ಈ ಕುಣಿತಗಳ ಪ್ರದರ್ಶನಗಳು ನಡೆಯುತ್ತವೆ. ಮಾದಿರದಂತಹ ಜನಪದ ಕುಣಿತಗಳಲ್ಲಿ ಇಡೀ ಕಥಾನಕವನ್ನು ಬಿಂಬಿಸುವುದು ಕರಾವಳಿ ಜಾನಪದರ ವೈಶಿಷ್ಟ್ಯವಾಗಿದೆ. ಈ ಕುಣಿತದ ಮುಖೇನ ತುಳುನಾಡಿನ ಸಂಸ್ಕೃತಿಯ ಮೇಲೆ ಇವರಿಗೆ ಇರುವ ಪ್ರೀತಿಯನ್ನು ತೋರಿಸುವುದರ ಜೊತೆಗೆ ಜನರಿಗೆ ಮನರಂಜನೆಯನ್ನೂ ನೀಡುತ್ತಾರೆ.

'ಮಾದಿರ' ಕುಣಿತದ ಹಾಡಿನಲ್ಲಿ 'ಮಾದಿರ' ಎನ್ನುವ ಹೆಣ್ಣು 'ಚೆನ್ನ' ಎಂಬ ಯುವಕನನ್ನು ಪ್ರೀತಿಸುವ ರೀತಿ, ಈಕೆ ವಿರಹವೇದನೆ ತಾಳಲಾರದೆ ಮಲೆ ಪರ್ವತದ ಕಡೆ ಹೋಗಿ ಆತನನ್ನು ಬರಮಾಡಿಕೊಳ್ಳುವುದು, ಆದರೆ ಮಾದಿರಾಳನ್ನು ಪ್ರೀತಿಸಬಾರದೆಂದು ಒತ್ತಡ. ಕೆಟ್ಟವಳೆಂಬ ಪಟ್ಟಿ, ಚೆನ್ನ ಮಾದಿರಾಳ ರೂಪಿಗೆ ಮನಸೋಲುವ ರೀತಿ ಪ್ರೀತಿಯ ನಶೆಯಲ್ಲಿದ್ದ ಮಾದಿರಾಳನ್ನು ಆಕೆಯ ಕಡೆಯವರು ತಡೆಯುವುದು. 'ಆತನಿಗೆ ಚೆಲುವಿಲ್ಲ, ಸೊಪ್ಪಿನ ಗೂಟದಂತಿದ್ದಾನೆ, ಬಳ್ಳದಂತೆ ಕುರೂಪಿ' ಎಂದೆಲ್ಲ ಹೇಳಿದರೂ ಪ್ರೇಮಕ್ಕೆ ಕಣ್ಣಿಲ್ಲ ಎಂಬ ಮಾತಿನಂತೆ ಪ್ರೀತಿಸುತ್ತಾರೆ. ನಂತರ ಗುರುಹಿರಿಯರ ಸಮ್ಮುಖದಲ್ಲಿ ಮಾದಿರ ಚೆನ್ನನ ಕೈ ಹಿಡಿಯುತ್ತಾಳೆ. ಮುಂದೆ ಅವರೀರ್ವರ ಮಧ್ಯೆ ವೈಮನಸ್ಸು ಉಂಟಾಗಿ ಆಕೆ ಗಂಡನನ್ನು ಬಿಟ್ಟು ತವರು ಮನೆ ಸೇರುತ್ತಾಳೆ. ಇದು ಇಡೀ ಮಾದಿರ ಕುಣಿತದ ವಸ್ತು. ಇದನ್ನು ನಲಿಕೆಯವರು ಬಹಳ ಲಯಬದ್ಧವಾಗಿ ಕುಣಿತದ ಮೂಲಕ ಬಿಂಬಿಸುವ ಕಲೆಗಾರಿಕೆ ಅದ್ಭುತವಾದುದು.

ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ ಹೇಳುವಂತೆ, "ಓದಲು ಬರೆಯಲು ಬಾರದಿದ್ದರೂ ಜನಪದರು ಮೂಕರಾಗಿರಲಿಲ್ಲ. ವಾಸ್ತವಿಕವಾಗಿ ಲಿಖಿತ ಪರಂಪರೆಗೆ ಕಂಠಸ್ಥ ಪರಂಪರೆಯನ್ನು ಹುಟ್ಟುಹಾಕಿ ಆ ಮೂಲಕ ತಮ್ಮ ಆಲೋಚನೆ, ಭಾವನೆ ಪ್ರತಿಭಟನೆ ಮತ್ತು ವಿರೋಧಗಳನ್ನು ಸಮರ್ಪಕವಾದ ರೀತಿಯಲ್ಲಿ ಅಭಿವ್ಯಕ್ತಗೊಳಿಸುತ್ತಾ ಬಂದಿದ್ದಾರೆ. ಜಾನಪದವನ್ನು ಈ

ಹಿನ್ನೆಲೆಯಲ್ಲಿ ಗ್ರಹಿಸಿದಾಗ ಈ ಮಾತಿನ ಅರ್ಥ ಮತ್ತು ಮಹತ್ವ ಸ್ಪಷ್ಟವಾಗುತ್ತದೆ. ಇಲ್ಲಿ ಮೌಖಿಕವಾಗಿ ಪ್ರಸಾರಗೊಳ್ಳುತ್ತಿರುವ ಕವಿತೆಗಳು ಪಾಡ್ದನಗಳು, ಕತೆಗಳು, ಗಾದೆಗಳು, ಒಗಟುಗಳು, ಐತಿಹ್ಯಗಳು, ಜನಪದ ಆಟಗಳು, ಭೌತಿಕ ಸಂಸ್ಕೃತಿ, ಜೀವನಾವರ್ತನ, ಮತ್ತು ಸಾಮೂಹಿಕ ಆಚರಣೆಗಳು, ರಂಗಪ್ರದರ್ಶನ ಕಲೆಗಳು, ಕುಣಿತಗಳು –ಇವುಗಳೆಲ್ಲವೂ ಈ ಪ್ರದೇಶದ ಅಕ್ಷರ ಬಾರದ ಜನರು ಮಾತನಾಡಿದ ಬಗೆಯೇ ಆಗಿದೆ. ಜಾತೀಯ ಸಮಸ್ಯೆ ಶೋಷಣೆಯ ಪ್ರಶ್ನೆ, ಹುಟ್ಟು ಸಾವುಗಳ ವಿಷಯ, ಸ್ವರ್ಗ ನರಕಗಳ ಪರಿಕಲ್ಪನೆ, ದುಡಿಮೆ ಮತ್ತು ಕುಟುಂಬದ ವಿಷಯ–ಹೀಗೆ ಅನೇಕ ಸಂಗತಿಗಳ ಕುರಿತಂತೆ ಜನಪದರು ಹೊಂದಿದ ಧೋರಣೆಗಳನ್ನು ಕುಣಿತಗಳ ಮೂಲಕ ಪ್ರಕಟಿಸಿದ್ದಾರೆ.( ಪಾಲ್ತಾಡಿ ರಾಮಕೃಷ್ಣ ಆಚಾರ್: ಸಂವಹನ ಮಾಧ್ಯಮವಾಗಿ ಜನಪದ ಕುಣಿತಗಳು ೧೯೯೯, ೭೫) ಹೀಗೆ ಮನುಷ್ಯನ ದೈಹಿಕ ಮತ್ತು ಮಾನಸಿಕ ಸ್ಥಿತಿಗೆ ಸಂಬಂಧಪಟ್ಟ ಈ ಪ್ರದರ್ಶನ ಕಲೆಗಳು ಸಮಾಜದ ಸಾಂಸ್ಕೃತಿಕ ಸ್ವರೂಪವನ್ನು ಬಿಚ್ಚಿಡುತ್ತವೆ.

ಪಂಜುರ್ಲಿ ಭೂತದ ಕೋಲದ ಸಂದರ್ಭದಲ್ಲಿ ಹೆಂಗಳೆಯರ ಸಂಭ್ರಮ, ಜಾತಿಭೇದ ಮರೆತು ತಮ್ಮ ಮನೆಗೆಲಸದಂತೆ ಊರಿನ ಜನರೆಲ್ಲಾ ಸೇರಿ ದುಡಿಯುವ ಚಿತ್ರಣವೊಂದು 'ಮಾದಿರ' ಕಾದಂಬರಿಯಲ್ಲಿದೆ. ಇಲ್ಲಿ ಕಳೆದು ಹೋದ ಒಂದು ಸಂಸ್ಕೃತಿಯನ್ನು ಮರು ವ್ಯಾಖ್ಯಾನಿಸುವ ಸಂದರ್ಭವೂ ಹೌದು ನ್ಯಾಯ ತೀರ್ಮಾನದ ಸಂದರ್ಭದಲ್ಲಿ ಮಾಣೂರಿನ ಜನ ದೈವ ದೇವರುಗಳಲ್ಲಿ ಇಟ್ಟ ನಂಬಿಕೆ, ಭೂತದ ಪೂಜಾರಿ ಕೊಡುವ ನುಡಿ ಸುಳ್ಳಾದರೆ ಮೇಲೆ ನಿಂತ ಸುಬ್ರಹ್ಮಣ್ಯ ಸ್ವಾಮಿ, ಭೂಮಿಯಲ್ಲಿ ನಿಂತ ಪಂಜುರ್ಲಿ ಅದಕ್ಕೆ ಉತ್ತರ ಕೊಡುತ್ತದೆ"– ಎಂಬ ನುಡಿ– ಇವೆಲ್ಲವುಗಳನ್ನು ಗಮನಿಸುವಾಗ ಒಂದು ಪ್ರದೇಶದ ಆಚರಣೆ ಮತ್ತು ನಂಬಿಕೆಗಳು ಜೊತೆ ಜೊತೆಯಾಗಿ ಜನಮಾನಸದಲ್ಲಿ ಆಳವಾಗಿ ಬೇರುಬಿಟ್ಟ ಸಂದರ್ಭವನ್ನು ಗುರುತಿಸಬಹುದು.

'ಮಾದಿರ' ಕಾದಂಬರಿ ತುಳುನಾಡಿನ ಜಾನಪದ ಕುಣಿತಗಳಲ್ಲಿ ಒಂದಾದ 'ಮಾದಿರ' ಕುಣಿತದ ರೀತಿ ನೀತಿಗಳನ್ನು ವಿವರಿಸುತ್ತದೆ. ಸುಗ್ಗಿ ಕೊಯಿಲು ಮುಗಿದು ಬೇಸಾಯದ ಕಾರ್ಯಗಳೆಲ್ಲ ನೆರವೇರಿದ ಮೇಲೆ ರೈತಾಪಿ ವರ್ಗದವರು ಸಂತೋಷ ಸಂಭ್ರಮದಿಂದಿರಲು 'ಮಾದಿರ' ವೇಷ ಬರುತ್ತದೆ. ನೀರ್ ಮಾರ್ಗರವರು ತಮ್ಮ ಕಾದಂಬರಿಯ ಮೊದಲ ಪುಟಗಳಲ್ಲಿ ಈ ಕುರಿತ ಮಾಹಿತಿಯನ್ನು ನೀಡುತ್ತಾರೆ. ಆಚರಣಾತ್ಮಕ ಕುಣಿತಗಳಲ್ಲಿರುವ ಸಾಮಾಜಿಕ ಬದ್ಧತೆ, ಸಾಂಪ್ರಾದಾಯಿಕ ನಿಲುವು, ವೇಷಭೂಷಣಗಳ ಶೈಲಿ ಉಲ್ಲೇಖಿತಗೊಂಡಿದೆ. ಮಾದಿರ ವೇಷ ಮನೆ ಮನೆಗೆ ಬಂದಾಗ ಜನರು ಅವರೊಡನೆ ನಡೆದುಕೊಳ್ಳುವ ರೀತಿ ಅಕ್ಕಿ ದವಸಧಾನ್ಯಗಳೊಡನೆ ದುಡ್ಡು, ಸೀರೆ, ಪಂಚೆಗಳನ್ನು ನೀಡಿ ಗೌರವಿಸುವ ಕ್ರಮ ತುಳುನಾಡಿನ ಸಾಂಸ್ಕೃತಿಕ ಬದುಕಿನ ಮಹತ್ವವನ್ನು ತಿಳಿಸುತ್ತದೆ.

ಸಾಂಪ್ರದಾಯಿಕ ಆಚರಣೆಗಳಲ್ಲಿ ಕೋಲ ಬಲಿಯೂ ಒಂದು ವಿಶೇಷ ಪದ್ಧತಿಯಾಗಿತ್ತು. ಮಾಗಿಯಾ ಚಳಿಯಲ್ಲೂ ಈ ಆಚರಣೆಯನ್ನು ಜನಪದರು ಭಯ ಭಕ್ತಿಯಿಂದ ಕೈಗೊಳ್ಳುತ್ತಿದ್ದರು. "ಅದು ಮಾಗಿಯ ಚಳಿ ಚುಮು ಚುಮು ಚಳಿಯಲ್ಲೂ ಮೈಕೈ ಮರಕಟ್ಟಿದ ಅನುಭವ ಆದರೂ ಜನರು ಮೈಗೆ ಕಂಬಳಿ ಹಾಕಿಕೊಂಡು ಕೈಯಲ್ಲೊಂದು ಸೂಟಿ ಹಿಡಿದುಕೊಂಡು ಫಲಪುಷ್ಪದೊಂದಿಗೆ ಹೊರಟಿದ್ದರು. ದೂರದಲ್ಲಿ ನಾಗಸ್ವರದ ಬ್ಯಾಂಡುವಾದ್ಯಗಳ ಸದ್ದು ಗದ್ದಲ ಕೇಳಿಸುತ್ತಿತ್ತು. ಜನ ಬಹಳ ಭಯ ಭಕ್ತಿಯಿಂದ ಹೆಜ್ಜೆ ಹಾಕುತ್ತಿದ್ದರು. ಹೆಂಗಸರು ಮಕ್ಕಳೆನ್ನದೆ. ಹೊರಟಿದ್ದರು. ನಾಗಸ್ವರದ ನಿನಾದ ಆಲಿಸಿದಾಗ ಅದು ಕೋಲ ಬಲಿಗೆ ಸಿದ್ಧತೆ ಮಾಡಿದಂತಿತ್ತು. ಅಂದು ಆ ಊರಿನ ದೈವವಾದ ಪಂಜುರ್ಲಿ ಭೂತದ ಕೋಲ. ಸುಗ್ಗಿ ಬೆಳೆ ಕೊಯಿಲಾದಾಗ ಕೋಲಬಲಿಯನ್ನು ಹಮ್ಮಿಕೊಳ್ಳುವುದು. ಊರಿನ ಸಂಪ್ರದಾಯ ಅದಕ್ಕಾಗಿ ಊರಿನಲ್ಲಿ ವರುಷದ ಮೊದಲು ಸಿದ್ಧತೆ ನಡೆಯುತ್ತಿತ್ತು. ಊರ ಪಂಜುರ್ಲಿಗೆಂದೇ ವರ್ಷದ ಮೊದಲೇ ಕೋಳಿಗಳನ್ನು ಸಾಕಿ ದೈವಕ್ಕೆ ಬಲಿ ಕೊಡುವುದು ಊರವರ ಕಾಯಕ....."(ಮಾದಿರ; ೨೦೦೭, ೧೬) ಎಂಬೀ ವಿವರಗಳು ತುಳುನಾಡಿನ ಪ್ರಾದೇಶಿಕ, ಸಾಮಾಜಿಕ, ಸಾಂಸ್ಕೃತಿಕ ವಿಚಾರಗಳನ್ನು ಕಟ್ಟಿಕೊಡುತ್ತದೆ. ಪ್ರತಿಯೊಂದು ಆಚರಣೆಗಳು ಅದರದ್ದೇ ಆದ ಹಿನ್ನೆಲೆ ಪ್ರದರ್ಶನ ಸಮಯ ನಂಬಿಕೆ ನಡವಳಿಕೆಗಳು ಇದ್ದೇ ಇರುತ್ತದೆ. ಇಂತಹ ಸಾಕಷ್ಟು ವಿಚಾರಗಳನ್ನು ನೀರ್‌ಮಾರ್ಗರವರ ಕಾದಂಬರಿಗಳನ್ನು ಕಂಡು ಕೊಳ್ಳಬಹುದು.

## ೩.೪ ಸಾಮಾಜಿಕ ವ್ಯವಸ್ಥೆ

ತುಳುನಾಡಿನ ಸೌಂದರ್ಯಕ್ಕೆ ಇಲ್ಲಿನ ರಮಣೀಯ ನಿಸರ್ಗ ಒಂದು ಕಾರಣವಾದರೆ, ಇನ್ನೊಂದು ಇಲ್ಲಿಯ ದೈವದೇವತೆಗಳ ಆರಾಧನೆ. ನಾಗಾರಾಧನೆ, ಭೂತಾರಾಧನೆಗಳು ಇಲ್ಲಿ ದೇವಾರಾಧನೆಗಿಂತಲೂ ಪ್ರಾಚೀನವಾದ ಪರಂಪರೆಯುಳ್ಳವಾಗಿದೆ. ತುಳುವರ ವೈಯಕ್ತಿಕ ಮತ್ತು ಸಾಮಾಜಿಕ ಬದುಕಿನ ಮೂಲ ಸೆಲೆಯಾಗಿದೆ. ತುಳುನಾಡಿನ ಆರಾಧನಾ ಸಂಪ್ರದಾಯಗಳಲ್ಲಿ ಮನೋರಂಜನೆಯ ಅಂಶಗಳು ಇರುವುದರೊಂದಿಗೆ, ಸಾಮಾಜಿಕ ಸ್ವಾಸ್ಥ್ಯದ ಕಾಳಜಿಯುಳ್ಳ ಗಂಭೀರ ಮುಖವನ್ನು ಕಾಣಬಹುದು. ಹಿಂದೂ ಸಮಾಜವು ಹಲವಾರು ಪಂಗಡ ವೈವಿಧ್ಯದಿಂದ ಕೂಡಿದ್ದರೂ, ಕೆಲವೊಂದು ಸಮಾನ ಜೀವನಧೋರಣೆ, ರೂಢಿ, ಪರಂಪರೆಗಳನ್ನು ಪಾಲಿಸಿಕೊಂಡು ಬರುವ ಅನೇಕ ಗುಂಪುಗಳು ಈ ವಿಶಾಲ ಸಮಾಜದ ಘಟಕಗಳಾಗಿವೆ. ಚಾರಿತ್ರಿಕ ಹಾಗೂ ಸಾಮಾಜಿಕ ವೈಶಿಷ್ಟ್ಯಗಳನ್ನು ಪಡೆದ ಮಾತೃ ಪ್ರಧಾನ ಪದ್ಧತಿ ತುಳುನಾಡಿನಲ್ಲಿ ನಡೆದುಕೊಂಡು ಬಂದಿದೆ. ಅಳಿಯ ಕಟ್ಟಿಗೆ ಮೂಲವಾಗಿ ಹೇಳುವಂತಹ ಭೂತಾಳ ಪಾಂಡ್ಯನ ಕತೆ ತುಳುನಾಡಿಗೆ ಸಂಬಂಧಿಸಿದ್ದೇ ಆಗಿದೆ.

ತುಳುನಾಡಿನ ಸಾಮಾಜಿಕ ವ್ಯವಸ್ಥೆಯನ್ನು ಪ್ರಸ್ತುತಪಡಿಸುವ ಅನೇಕ ಆರಾಧನೆಗಳು ನಮ್ಮಲ್ಲಿ ಇಂದಿಗೂ ಇವೆ. ಸಾಮಾಜಿಕವಾಗಿ ಇರತಕ್ಕಂತಹ ವ್ಯವಸ್ಥೆಗಳನ್ನು ಉಲ್ಲೇಖಿಸಲ್ಪಟ್ಟಿವೆ. ಹಿಂದೆ ಸಮಾಜದಲ್ಲಿ ಊಳಿಗಮಾನ್ಯ ಪದ್ಧತಿಯೂ ಶ್ರೇಣೀಕೃತ ಜಾತಿ ಪದ್ಧತಿಯೂ ರೂಢಿಯಲ್ಲಿ ಇದ್ದುದರಿಂದ ಅವುಗಳ ಪಡಿನೆಳಲು ದೈವಾರಾಧನೆಯಲ್ಲಿ ಕಾಣುವುದ ಸಹಜ. ಜಾತಿಯ ಉಚ್ಚ ನೀಚತೆ, ಕೆಲವೊಮ್ಮೆ ಅನಪೇಕ್ಷಿತವೆನಿಸುವಷ್ಟು ಮಡಿವೈಲಿಗೆ ಪ್ರವೃತ್ತಿ, ಎಂದೋ ಆಚರಣೆಗೆ ಬಂದು, ಇದು ಅನಗತ್ಯವೆಂದು ತೋರುವ ಕೆಲವು ಕಂದಾಚಾರಗಳು, ಈಗಲೂ ದೈವಾರಾಧನೆಯ ಕಕ್ಷೆಯೊಳಗೆ ಕಂಡು ಬರುವುದುಂಟು. ಕೆಲವೊಮ್ಮೆ ದಬ್ಬಾಳಿಕೆ, ಶೋಷಣೆಗಳ ಸಾಧನವಾಗಿ ಕೆಲವರು ಭೂತಗಳನ್ನು ಬಳಸಿದ್ದೂ ಉಂಟು. ಭೂತಕ್ಕೆ ನಿಲ್ಲುವವರ ಮೇಲೆ ಪ್ರಭಾವ ಬೀರಿ ತಮಗೆ ಬೇಕಾದಂತೆ ನ್ಯಾಯ ಹೇಳಿಸುವ ಕುಹಕ ತನವೂ ನಡೆದದ್ದುಂಟು. 'ಪರತ್ ನಿಗಿಪ್ಪೆರೆಲಾ ಬಲ್ಲಿ, ಪೊಸತ್ ತೋಡ್ಯರೆಲಾ ಬಲ್ಲಿ' (ಹಳೆಯದನ್ನು ಎಂದರೆ ಹಳೆಯ ಬಾವಿಯನ್ನು ಮುಚ್ಚಲೂ ಬಾರದು, ಹೊಸತು ತೋಡಲೂ ಬಾರದು) ಎಂಬುದೇ ಹೆಚ್ಚಿನ ಭೂತಗಳ ಧ್ಯೇಯ ವಾಕ್ಯವಾಗಿರುವಾಗ ಪರಂಪರೆಯನ್ನುಮಾತ್ರ ಮನ್ನಿಸುವ ಭೂತಗಳು ಸಾಮಾನ್ಯವಾಗಿ ಬದಲಾವಣೆಗೆ ಸಿದ್ಧವಾಗುವುದಿಲ್ಲ. (ಅಮೃತಸೋಮೇಶ್ವರ : ತುಳು ಜಾನಪದ ಕೆಲವು ನೋಟಗಳು; ೨೦೦೭, ೧೪) ಎನ್ನುವ ವಿದ್ವಾಂಸ ಅಮೃತ ಸೋಮೇಶ್ವರರ ಮಾತುಗಳು ಒಟ್ಟು ಆರಾಧನೆಗಳಲ್ಲಿ ಸಾಮಾಜಿಕ ವ್ಯವಸ್ಥೆಗಳು ಹೇಗೆ ಪ್ರತಿಬಿಂಬಿಸಲ್ಪಡುತ್ತಿದ್ದವು ಎನ್ನುವುದು ಗೊತ್ತಾಗುತ್ತದೆ. ತುಳುನಾಡಿನಲ್ಲಿ ಜಾತಿಪದ್ಧತಿಯ ಹಿಡಿತ ಹಿಂದೆ ಪ್ರಬಲವಾಗಿದ್ದರೂ, ಕೆಲವೊಂದು ಸಂದರ್ಭಗಳಲ್ಲಿ ಜಾತಿ ಧರ್ಮದ ಸೀಮೆಯನ್ನು ಮೀರಿದ ಮಾನವತೆ ಮಿಂಚುತ್ತದೆ. ಈ ವಿಚಾರಕ್ಕೆ ಪೂರಕವಾಗಿಯೂ, ಸಮರ್ಥನೆಯಾಗಿಯೂ, ಅನೇಕ ಅಂಶಗಳು ಕಾದಂಬರಿಯ ಬೇರೆ ಬೇರೆ ಸಂದರ್ಭಗಳಲ್ಲಿ ವಿವರಿಸಲ್ಪಟ್ಟಿದೆ. ನೀರ್‌ಮಾರ್ಗರ ಅರ್ಘ್ಯ, ಮಾದಿರ, ತಂಬಿಲ ಮುಂತಾದ ಸಾಮಾಜಿಕ ಕಾದಂಬರಿಗಳೂ, 'ಮಂಗಳೂರು ಕ್ರಾಂತಿ' ಯಂತಹ ಐತಿಹಾಸಿಕ ಕಾದಂಬರಿಯೂ ತುಳುನಾಡಿನ ಸಾಮಾಜಿಕ ವ್ಯವಸ್ಥೆಯ ವಿಭಿನ್ನ ಮುಖಗಳನ್ನು ಪರಿಚಯಿಸುತ್ತದೆ.

ಹಿಂದೆ ನ್ಯಾಯ ತೀರ್ಮಾನದ ಸಂದರ್ಭಗಳು ಬಂದಾಗ ಜನರು ಕೋರ್ಟು ಕಚೇರಿಗಳನ್ನು ಅಲೆಯದೆ, ದೈವಗಳ ಮುಂದೆ ತಮ್ಮ ಕಷ್ಟ ಸುಖಗಳನ್ನು ನಿವೇದನೆ ಮಾಡಿಕೋಳ್ಳುತ್ತಾ ಪರಿಹಾರ ಕಂಡು ಹುಡುಕುತ್ತಿದ್ದದ್ದು, ಪಾರಂಪರಿಕ ತುಳುನಾಡ ಸಮಾಜದಿಂದಲೂ ಬಂದಿರುವಂತಹುದು. ನ್ಯಾಯಾಂಗ ವ್ಯವಸ್ಥೆಯ ಪಾತ್ರಗಳನ್ನು ಭೂತಗಳು ನೆರವೇರಿಸುತ್ತಿದ್ದವು ಎನ್ನುವ ವಿಚಾರವನ್ನು ಕಾದಂಬರಿಗಳಲ್ಲಿ ಗುರುತಿಸಬಹುದು. ತುಳುನಾಡಿನಲ್ಲಿ ದೈವಗಳನ್ನು ಸತ್ಯೊಳು ಎಂದು ಕರೆಯಲಾಗುತ್ತದೆ ಎಂಬುದು ಗಮನೀಯ. ಸತ್ಯವೆಂಬುದು ನ್ಯಾಯ ದೃಷ್ಟಿಯುಳ್ಳದ್ದು ಎಂಬುದು ಸ್ವಯಂವೇದ್ಯ. ತನಗೆ ಅನ್ಯಾಯವಾಗಿದೆಯೆಂದು ತಿಳಿದುಕೊಂಡವರು

'ಇಂಥ ಭೂತ ನೋಡಿಕೊಳ್ಳಲಿ!' ಎಂದು ಅದರ ಅಥವಾ ಅದು ನೆಲೆಸಿದ ಸ್ಥಳದ ಹೆಸರೆತ್ತಿ ಪ್ರಾರ್ಥಿಸುವುದು, ಶಪಿಸುವುದು ಇಂದಿಗೂ ಇದೆ. ಇಂಥ ಆಕ್ರೋಶಪೂರ್ಣ ಪ್ರಾರ್ಥನೆಯೇ ದೈವ ನ್ಯಾಯಾಲಯಕ್ಕೆ ಸಲ್ಲಿಸುವ ಫಿರ್ಯಾದು. ಕೆಲವು ವೇಳೆ ಸಂಬಂಧಿಕರನ್ನು ಅಥವಾ ಊರ ಹಿರಿಯರನ್ನು ಸಾಕ್ಷಿಯಾಗಿಟ್ಟುಕೊಂಡು ದೈವ ಸನ್ನಿಧಿಯಲ್ಲೋ ಇತರೆಡೆಗಳಲ್ಲೋ ಬಹಿರಂಗವಾಗಿ ಪ್ರಾರ್ಥಿಸುವುದುಂಟು. ಭೂತವು ತನಗೆ ಪ್ರತ್ಯಕ್ಷವಾಗಿ ಅಥವಾ ಅಪ್ರತ್ಯಕ್ಷವಾಗಿ ನ್ಯಾಯ ಕೊಡುತ್ತದೆ ಅಥವಾ ಕೊಡಿಸುತ್ತದೆ ಎಂಬ ನಂಬಿಕೆ, ಹಾಗೂ ದೈವದ ಕೋಪಕ್ಕೆ ಪಕ್ಕಾದವರು ಕಷ್ಟ ನಷ್ಟಗಳಿಗೆ ಗುರಿಯಾಗುತ್ತಾರೆಂಬ ಭೀತಿ ಜನರ ನಡವಳಿಕೆಯ ಮೇಲೆ ತಕ್ಕ ಮಟ್ಟಿನ ನಿಯಂತ್ರಣವನ್ನು ಸಾಧಿಸುವಲ್ಲಿ ಸಫಲವಾಗುತ್ತದೆ......" (ಡಾ.ಅಮೃತೇಶ್ವರ ಸೋಮೇಶ್ವರ: ತುಳುವ ಜಾನಪದ:ಕೆಲವು ನೋಟಗಳು; ೨೦೦೭, ೧೦೧). ಭೂತಗಳ ಭಯಪ್ರದ ಮುಖದಿಂದ ಗ್ರಾಮೀಣ ಜನತೆಯು ಸಾಮಾಜಿಕ ನ್ಯಾಯ ನೀತಿಗಳನ್ನು, ನಿಯಂತ್ರಣಗೊಳಿಸಲು ಶಕ್ತವಾಗಿದ್ದುದರಿಂದ ನ್ಯಾಯ ತೀರ್ಮಾನ ಮಾಡಲು ಯಾವ ಕೋರ್ಟಿನ ಜಡ್ಜರು ಬೇಡ, ಪಂಚಾಯತಿಕೆಯೂ ಬೇಡ. ಯಾವುದೇ ನ್ಯಾಯವನ್ನು ಇಲ್ಲಿ ಸಲೀಸಾಗಿ ಇತ್ಯರ್ಥ ಮಾಡಲಾಗುತ್ತಿತ್ತು. ಈ ದೃಷ್ಟಿಯಿಂದ ತುಳುನಾಡಿನಲ್ಲಿ ಪಟ್ಲೇರ್, ಪಂಚಾಯತ್ ವ್ಯವಸ್ಥೆ ಇದ್ದರೂ ಅಷ್ಟು ಪ್ರಯೋಜನಕ್ಕೆ ಬರುತ್ತಿರಲಿಲ್ಲ. ಇದೇ ರೀತಿ ಇನ್ನೊಂದು ನೆಲೆಯಲ್ಲಿ ಯೋಚಿಸಿದಾಗ ರಾಜಕೀಯ ಘಟಕಗಳನ್ನು ಹೋಲುವ ಶ್ರೇಣೀಕೃತ ವ್ಯವಸ್ಥೆಯು ಆರಾಧನಾ ವ್ಯವಸ್ಥೆಯಲ್ಲಿ ಕಂಡುಬರುತ್ತದೆ.

ತುಳುನಾಡ ಬಾಂಧವರು ಹೇಗೆ ಒಂದು ವ್ಯವಸ್ಥಿತವಾದ, ಸಾಂಗಿಕವಾದ ಜೀವನವನ್ನು ನಡೆಸುತ್ತಿದ್ದರು ಎನ್ನುವುದಕ್ಕೆ ಕಾದಂಬರಿಗಳಲ್ಲಿ ವಿಫುಲವಾಗಿ ವಿವರಗಳು ಸಿಗುತ್ತವೆ. ಇಲ್ಲಿಯ ಜನರ ಜೀವನ ಮೌಲ್ಯ, ನಂಬಿಕೆ, ನಡವಳಿಕೆ, ಆಟಕೂಟ, ಬೇಸಾಯ, ಒಟ್ಟಾಗಿ ಬದುಕುವ ವಿವಿಧ ಜಾತಿಧರ್ಮಗಳ ಜನರ ಸಮೂಹ ಇವೆಲ್ಲವೂ ಬಹಳ ಸ್ಪಷ್ಟವಾಗಿ ದಾಖಲುಗೊಂಡಿದೆ. ತುಳುನಾಡಿನಲ್ಲಿ ಮನೆಗೆ ಬಂದ ಅತಿಥಿಗಳನ್ನು ಪ್ರೀತಿ ಗೌರವಗಳಿಂದ ಉಪಚಾರ ಮಾಡುವ ಆತಿಥ್ಯ ಧರ್ಮ ತುಳುನಾಡಿನಲ್ಲಿ ಹಿಂದಿನಿಂದಲೂ ಇತ್ತು ಎನ್ನುವುದಕ್ಕೆ ಇಲ್ಲಿಯ ವಿವರಗಳೇ ಸಾಕ್ಷಿಯಾಗುತ್ತದೆ.

ಕಾದಂಬರಿಗಳಲ್ಲಿ ಪ್ರಕಟಗೊಳ್ಳುವ ಸಾಮಾಜಿಕ ವ್ಯವಸ್ಥೆಯನ್ನು ಅಭ್ಯಸಿಸಿಕೊಳ್ಳುವಾಗ ಗಮನಿಸಲೇಬೇಕಾದ ವಿಚಾರ ಧನಿ ಕೆಲಸಗಾರರ ಸಂಬಂಧ. ಇಲ್ಲಿ ಧಣಿಯೊಬ್ಬ ತನ್ನ ಕಾರ್ಮಿಕರನ್ನು ಕೀಳಾಗಿ ಕಾಣದೆ ತಮ್ಮ ಆಪ್ತರಂತೆ ಸಲಹುತ್ತಿದ್ದರು. ಆದ್ದರಿಂದ ಧನಿಗಳಿಗೇನಾದರೂ ತೊಂದರೆಗಳು ಉಂಟಾದರೆ, ಅದನ್ನು ಕೆಲಸಗಾರರು ತಮ್ಮ ತಾಪತ್ರಯದಂತೆ ಕಾಣುತ್ತಿದ್ದರು. ತುಳುನಾಡಿನಲ್ಲಿ ಗದ್ದೆ ಕೆಲಸ ಕಾರ್ಯಗಳಿಗಾಗಿ ಇಂತಿಷ್ಟು ಅಕ್ಕಿ ಅಥವಾ ಭತ್ತ ಕೂಲಿ ಕೊಡುವುದು ಸಾಮಾನ್ಯ. ಆಮೇಲೆ ಬೆಳಿಗ್ಗೆ ಸಾಯಂಕಾಲ

ಬಾಯಾರಿಕೆ, ಹಸಿವಿಗೆ ಸೇರಿ ಕಾಫಿ, ಫಲಾಹಾರ ಮಧ್ಯಾಹ್ನಕ್ಕೊಂದು ತರಕಾರಿ ಊಟ ಕೊಡುವುದು ಬಹಳ ಹಿಂದಿನಿಂದಲೂ ನಡೆದುಕೊಂಡು ಬಂದಿತ್ತು. ಆಗಿನ ಜನವೂ ಹಾಗೆಯೇ, ಕೂಲಿಗಾಗಿ ಬಾಯಿ ಬಾಯಿ ಬಿಡುವವರಲ್ಲ. ಒಂದು ರೀತಿಯ ನಂಬಿಕೆಯಿಂದ ತಮಗೆ ಕಷ್ಟ ಕಾಲಕ್ಕೆ ಸಹಾಯ ಆಗುತ್ತಾರೆ ಎನ್ನುವ ಭರವಸೆಯಿಂದ ಜನ ಧನಿಗಳನ್ನು ಆರಿಸುತ್ತಿದ್ದರು. (ಮದಿಪು; ೨೦೦೮, ೬೩) ಇಲ್ಲಿ ಕೃಷಿ ವ್ಯವಸ್ಥೆಯಲ್ಲಿದ್ದ ಪದ್ಧತಿಗಳನ್ನು ಹೇಳುತ್ತದೆ. ಧನಿಗಳಿಗೆ ನಿಷ್ಠಾವಂತರಾಗಿ ಕೆಲಸಗಾರರು ತಮ್ಮ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದ ಪರಿಯನ್ನು ಹೇಳುತ್ತದೆ. ಇಲ್ಲಿಯ ಜನರು ಶ್ರಮಜೀವಿಗಳು ಗಂಡು ಹೆಣ್ಣೆಂಬ ಭೇದವಿಲ್ಲದೆ ಶ್ರಮಪಟ್ಟು ದುಡಿದು ಬದುಕನ್ನು ಸಾಗಿಸುತ್ತಿದ್ದರು. ಪ್ರತಿಯೊರ್ವ ವ್ಯಕ್ತಿಯೂ ತಮ್ಮ ಪಾರಂಪರಿಕವಾದ ವೃತ್ತಿಯನ್ನು ಕೈಗೊಂಡು ಸಂಸಾರವನ್ನು ನಿಭಾಯಿಸುತ್ತಿದ್ದರು. ಎಷ್ಟೇ ಬಡವಾಗಿದ್ದರೂ ಇನ್ನೊಬ್ಬರಿಗೆ ಸಹಾಯಮಾಡುತ್ತಾ ಬದುಕುತ್ತಿದ್ದ ವಿವರಗಳು ಇಲ್ಲಿ ಸಿಗುತ್ತದೆ. "…….ಅಪ್ಪಿ ಎಲ್ಲರಿಗೂ ಬೇಕಾದವಳಾಗಿ ನಾಲ್ಕು ಜನರಿಗೆ ತನ್ನವೇ ಆದ ರೀತಿಯಲ್ಲಿ ಸಹಾಯ ಮಾಡಿ ಊರಿನಲ್ಲಿ ಒಳ್ಳೆಯ ಹೆಸರು ಪಡೆದಿದ್ದಳು. ಅದಕ್ಕೂ ಮಿಗಿಲಾಗಿ ಕಷ್ಟದ ಕುಲುಮೆಯಲ್ಲಿ ಬೆಂದು ಬಸವಳಿದಿದ್ದಳು. ಅನುಭವದ ಮೂಟೆಯಂತಾಗಿದ್ದಳು. ಮೀನು ಮಾರಾಟ ಅವಳ ಜೀವನವನ್ನು ಮುನ್ನಡೆಸುವ ಕಾಯಕವಾದರೂ ಎಂದೂ ಯಾರಿಗೂ ತೊಂದರೆ ಕೊಟ್ಟವಳಲ್ಲ. ನಾಲ್ಕು ಜನರಿಗೆ ಸಹಾಯ ಮಾಡುತ್ತಾ ಪರರ ನೋವನ್ನು ತನ್ನ ನೋವಿನಂತೆ ಎಂದು ಬಗೆಯ ಕೈಲಾದ ಸಹಾಯ ಮಾಡಿ ಎಲ್ಲರ ಮನ ಗೆದ್ದಿದ್ದಳು". (ಮದಿಪು;೨೦೦೮, ೨೧) ಈ ವಿವರಗಳು ತುಳುನಾಡಿನಲ್ಲಿ ಸಾಮಾನ್ಯ ಹೆಂಗಸರೂ ಯಾವ ರೀತಿ ಪರೋಪಕಾರಿಗಳಾಗಿ ಬದುಕುತ್ತಿದ್ದರು ಎನ್ನುವುದನ್ನು ತಿಳಿಸುತ್ತದೆ. ತುಳುನಾಡಿನಲ್ಲಿ ಮೊದಲಿನಿಂದಲೂ ಕೂಡು ಕುಟುಂಬದೊಂದಿಗೆ ವಾಸಿಸುತ್ತಿದ್ದ ಕೃಷಿಕರು ಇದ್ದರೂ, ಅವರ ಮನೆಗೆ ಹೊಂದಿಕೊಂಡು ತೋಟ, ಬೈಲು, ಗದ್ದೆಗಳು, ಬಾಕಿಮಾರು ಗದ್ದೆಗಳು, ಬೆಟ್ಟುಗದ್ದೆಗಳು ಇರುತ್ತಿದ್ದವು. ಹಾಗೆಯೇ ಸಾಮಾಜಿಕ ವ್ಯವಸ್ಥೆಯೊಳಗಡೆ ಧರ್ಮ ಧರ್ಮಗಳ ನಡುವೆ ತಿಕ್ಕಾಟ ಒಂದೆಡೆಯಾದರೆ, ಇಂತಹ ಮಧ್ಯೆಯೂ ಧರ್ಮಗಳಲ್ಲಿ ಕೆಲವರು ಇದನ್ನು ಮೀರಿನಿಂತರವೂ ಇದ್ದರು, ಎಂಬುದನ್ನು ಇಲ್ಲಿ ತಿಳಿಬಹುದು. 'ತಂಬಿಲ' ಕಾದಂಬರಿಯಲ್ಲಿ ಕ್ರೈಸ್ತ ಧರ್ಮಕ್ಕೆ ಸೇರಿದ ಲೂಸಿ, ಸಮಾಜ ಸೇವೆಯಿಂದ ಜನಮನ್ನಣೆಗೆ ಪಾತ್ರಳಾಗುತ್ತಾಳೆ. ಕೆಲವರು ಇವಳ ಬಗ್ಗೆ ಅಪಪ್ರಚಾರ ಮಾಡಿದರೂ, ಚವುಡ ಇವಳಿಗೆ ಸಂಪೂರ್ಣ ಬೆಂಬಲವಾಗಿ ನಿಲ್ಲುತ್ತಾನೆ. ನಿನ್ನಂತಹ ಒಳ್ಳೆಯ ಗುಣದ ಸೊಸೆ ಸಿಗುವುದಾದರೆ ನಾನು ನನ್ನ ಜಾತಿಯನ್ನು ಬಿಡಲು ಸಿದ್ಧ ಎಂದಾಗ, ಚವುಡನಿಗೆ ಜಾತಿಯಿಂದ ಬಹಿಷ್ಕಾರ ಮುಂದುವರಿಯಿತು. ಚವುಡ ಯಾವುದಕ್ಕೂ ಹಾಂ ಹೂಂ ಅನ್ನಲಿಲ್ಲ. ಚರ್ಚಿನ ಸಮಾರಂಭದಲ್ಲೂ ಭಾಗವಹಿಸಿದ, ಮಸೀದಿಯ ಕಾರ್ಯಕ್ರಮದಲ್ಲೂ ಭಾಗವಹಿಸಿದ, ಹಿಂದೂ ಸಮಾರಂಭಗಳಲ್ಲೂ ಭಾಗವಹಿಸುತ್ತಿದ್ದ" (ತಂಬಿಲ ೨೦೦೩, ೨೦೨) ಇಲ್ಲಿ ಜಾತಿ

ಧರ್ಮವನ್ನು ಮೀರಿದ ವ್ಯಕ್ತಿಯೊರ್ವನನ್ನು ಗುರುತಿಸಬಹುದು. ಇಲ್ಲಿ ಲೂಸಿ ಹಿಂದೂ ಮುಸ್ಲಿಂ ಜಾತಿಗಳ ಆಚಾರ ವಿಚಾರಗಳನ್ನೂ ಮೈಗೂಡಿಸಿಕೊಂಡವಳು. ಜಾತ್ರೆ, ಉತ್ಸವಗಳಲ್ಲಿ ಸಭೆ ಸಮಾರಂಭಗಳಲ್ಲೂ ಭಾಗವಹಿಸಿ ತನ್ನ ಜಾತ್ಯಾತೀತ ತತ್ವವನ್ನು ಜಾಹೀರುಗೊಳಿಸುತ್ತಾಳೆ. ಇಲ್ಲಿ ಶ್ರೇಣೀಕೃತ ಸಮಾಜ ವ್ಯವಸ್ಥೆಯೊಳಗೆ ಸಮಾನತೆಯನ್ನು ತರುವ ಉದ್ದೇಶ ಲೇಖಕರಲ್ಲಿ ಇರುವುದು ಸ್ಪಷ್ಟವಾಗುತ್ತದೆ. ಒಟ್ಟಿನಲ್ಲಿ ಪ್ರಗತಿಪರ ಮನೋಧರ್ಮವು ಇವರ ಕಾದಂಬರಿಯಲ್ಲಿ ಪ್ರಕಟವಾಗಿದೆ.

ಗುರಿಕಾರನೆಂದರೆ ಒಂದು ವ್ಯಕ್ತಿಗೆ ಕೊಡುವ ಗೌರವದ ಸಂಕೇತ. ಆತ ನಿಷ್ಪಕ್ಷಪಾತನಾಗಿರಬೇಕು. ಎಲ್ಲರಲ್ಲು ಮುಕ್ತವಾಗಿ ಬೆರೆಯುಬೇಕು. ಒಳ್ಳೆಯ ಮಾತುಗಾರನಾಗಿರಬೇಕು. ನ್ಯಾಯ ತೀರ್ಮಾನ ತಿಳಿದಿರಬೇಕು. ತುಳು ನಾಡಿನಲ್ಲಿ ಗುರಿಕಾರನ ಸ್ಥಾನಮಾನದ ಕುರಿತಾಗಿ ನೀರ್‌ಮಾರ್ಗದವರು 'ಮಾದರಿ' ಕಾದಂಬರಿಯಲ್ಲಿ ಈ ರೀತಿ ಉಲ್ಲೇಖಿಸುತ್ತಾರೆ. ಗುರಿಕಾರನೆಂದ ಮೇಲೆ ಅಲ್ಲಲ್ಲಿ ಸಮಾಜ ಬಾಂಧವರ ಕಾರ್ಯಕ್ರಮ ಇರುತ್ತದೆ. ಐದು ಮಾಗಣೆಗಳಿಗೆ ಗುರಿಕಾರನೆಂದ ಮೇಲೆ ಆತ ಎಷ್ಟೇ ಕೆಟ್ಟವನಾಗಲಿ ಎಂತಹ ಜನವೇ ಆಗಿರಲಿ ಗುರಿಕಾರ್ಮೆಯ ಮರ್ಯಾದೆ ಕೊಡುವುದು ಕೊಡಬೇಕಲ್ಲ, ಹೀಗಾಗಿ ಯಾವ ಸಮಾರಂಭಕ್ಕೆ ಹೋಗಲಿ, ಮದುವೆ ಮುಂಜಿ, ಬಯಕೆ, ನೇಮ, ಕೋಲ, ಪೂಜೆ ಇತ್ಯಾದಿ ಸಮಾರಂಭಗಳಲ್ಲಿ ಗುರಿಕಾರನಿಗೆ ಮರ್ಯಾದೆ ಮಾಡಿದ ಮೇಲೆಯೇ ಶುಭ ಕೆಲಸ ಆರಂಭವಾಗುವುದು. ಲೇಸ್ ತೆಗೆಗುವವರು ಬಂದು ಒಂದು ಸೇರು ಅಕ್ಕಿ, ತಾಂಬೂಲ, ಹನ್ನೆರಡು ಆಣೆ ದುಡ್ಡು ಇತ್ಯಾದಿಯನ್ನು ಒಂದು ತಟ್ಟೆಯಲ್ಲಿ ಹಾಕಿ ಗುರಿಕಾರನಿಗೆ ಮೊದಲ ಮರ್ಯದೆ ನೀಡಬೇಕು. ಸ್ವಲ್ಪ ಸ್ಥಾನಮಾನವಿದ್ದವರು ಅರಿವೆ ಇತ್ಯಾದಿ ಉಡುಗೊರೆಗಳನ್ನು ನೀಡಿ ಗುರಿಕಾರನನ್ನು ಖುಷಿಪಡುತ್ತಾರೆ. (ಮಾದಿರ; ೨೦೦೭, ೬೦) ತುಳುನಾಡಿನಲ್ಲಿ ಒಂದೊಂದು ಜಾತಿಗೂ ಒಂದೊಂದು ಗುರಿಕಾರ ಇದ್ದುದ್ದು ಕಂಡು ಬರುತ್ತದೆ. ಕೆಲವೆಡೆ ಒಂದು ಸಮುದಾಯವನ್ನು ಈತ ಪ್ರತಿನಿಧಿಸಿದರೆ, ಇನ್ನು ಕೆಲವೆಡೆ ಒಂದು ಗ್ರಾಮವನ್ನು ಈತ ಪ್ರತಿನಿಧಿಸುತ್ತಿದ್ದ. ಈ ಕುರಿತು ವಿವರಗಳು ನೀರ್‌ಮಾರ್ಗರವರ ಕಾದಂಬರಿಗಳಲ್ಲಿ ಬರುತ್ತದೆ. ತುಳುನಾಡಿನಲ್ಲಿ ಗುರುಕಾರನ ಅಧಿಕಾರವೇನು ? ಆತನಿಗೆ ಜನರು ಯಾವ ರೀತಿಯ ಮರ್ಯಾದೆಯನ್ನು ನೀಡುತ್ತಿದ್ದರು ಎಂಬುದನ್ನು ಇಲ್ಲಿ ತಿಳಿಯಬಹುದು. ಗುರಿಕಾರನಿಗೆ ಅವನದ್ದೇ ಆದ ಸ್ಥಾನಮಾನವಿದೆ. ಸಮಾಜದಲ್ಲಿ ಮೊದಲು ಮರ್ಯಾದೆ ಆತನಿಗೆ. ಒಂದು ಒಳ್ಳೆಯ ಕೆಲಸವಾಗಬೇಕಾದಲ್ಲಿ ಈತನಲ್ಲಿ ಕೇಳಿ ತೀರ್ಮಾನವಾಗಬೇಕು. ಇದನ್ನು ಮುರಿದರೋ ಅವರಿಗೆ ಬಹಿಷ್ಕಾರ ಖಂಡಿತ. ಈತ ನೀಡುವ ಬಹಿಷ್ಕಾರ ಬಹುಕಠಿಣವಾಗಿ ಇರುತ್ತಿತ್ತು. ಯಾವನಿಗಾದರೂ ಒಬ್ಬನಿಗೆ ಬಹಿಷ್ಕಾರ ಸಿಕ್ಕದರೆ ಆತ ಮತ್ತೆ ತಲೆಯೆತ್ತಿ ಬಾಳುವ ಹಾಗಿಲ್ಲ. ಆತನಿಗೆ ಮದುವೆ ಮಸಿರಿಗಳಿಗೆ ಪ್ರವೇಶವಿಲ್ಲ. ಜಾತಿ ಕುಲಬಾಂಧವರಿಂದ ಒಂದು ತೊಟ್ಟು

ನೀರೂ ಸಿಗಲಿಕ್ಕಿಲ್ಲ. ಸತ್ತರೆ ಹೆಣ ಮುಟ್ಟಲಿಕ್ಕಿಲ್ಲ. ಇಂತಹ ಕಠೋರವಾದ ನಿರ್ಧಾರವನ್ನು ತೆಗೆದುಕೊಳ್ಳುವ ಅಧಿಕಾರ ಆತನಿಗಿರುತ್ತಿತ್ತು.

ಪ್ರತಿ ವರ್ಷಕ್ಕೆ ಒಂದೊಂದು ಮನೆಯವರು ೧೦ ಸೇರು ಅಕ್ಕಿ, ಒಂದು ತೆಂಗಿನಕಾಯಿ ಗುರಿಕಾರನ ಮನೆಗೆ ತಂದುಕೊಡಬೇಕಿತ್ತು. ತಪ್ಪಿದಲ್ಲಿ ದಂಡ ತೆರಬೇಕಾಗಿತ್ತು. ಆಮೇಲೆ ಮನೆಯಲ್ಲಿ ಶುಭ ಕಾರ್ಯ ನಡೆವಲ್ಲಿ ಮೊದಲ ಹೇಳಿಕೆ ಗುರಿಕಾರನಿಗೆ ನೀಡಬೇಕಿತ್ತು. ಗುರಿಕಾರನಲ್ಲಿ ಕೇಳಿ ಹೆಣ್ಣು ಕೊಡುವುದು, ಬಿಡುವುದು, ಹಾಗೂ ನ್ಯಾಯ ತೀರ್ಮಾನ ಎಲ್ಲಾ ಗುರಿಕಾರನಿಂದ ನಡೆಯಬೇಕಾಗಿತ್ತು.

ಈ ಕಾದಂಬರಿಯಲ್ಲಿ ಮದುವೆಯ ವಿಧಿ ವಿಧಾನಗಳನ್ನು ತಿಳಿಸಲಾಗಿದೆ. ಮದುಮಕ್ಕಳಿಗೆ ಧಾರೆಯೆರೆದು, ಸಪ್ತಪದಿ ತುಳಿದ ಮೇಲೆ ಉಡುಗೊರೆ ನೀಡುವುದು. ಕಂಚಿನಲಿ ಇಡುವುದು ಕ್ರಮ. ವಧುವರರ ಮುಂದೆ ಒಂದು ಕಂಚಿನ ಬಟ್ಟಲು ಇಟ್ಟು ಅದರಲ್ಲಿ ಉಡುಗೊರೆ ನೀಡುವುದು. ಆಗ ಕಂಚಿನ ಬಟ್ಟಲಿನಲ್ಲಿ ಹಾಕಿದ ದುಡ್ಡಿನ ವಿವರವನ್ನು 'ಕಂಚಿ ಕರೆಯುವವನು' ಜೋರಾಗಿ ಕೂಗಿ ಹೇಳುವುದು ಕ್ರಮ. ಈ ಕ್ರಮವು ಇತ್ತೀಚಿನವರೆಗೂ ತುಳು ಸಂಸ್ಕೃತಿಯಲ್ಲಿ ಕಂಡು ಬರುತ್ತಿತ್ತು. ಕಂಚಿಯಲ್ಲಿ ಕೂಗುವವನು ಜೋರಾಗಿ ಕೂಗಿ ಅದನ್ನು ಸಾರ್ವಜನಿಕರಿಗೆ ಪ್ರಕಟಿಸಿದ ನಂತರ, ವಧೂವರರನ್ನು ಹರಿಸಿ ಊಟಕ್ಕೆ ಕಳುಹಿಸುವ ಪದ್ಧತಿಯಿರುವುದು.

# ಅಧ್ಯಾಯ ೪: ತುಳುನಾಡಿನ ಧಾರ್ಮಿಕ ಸ್ವರೂಪ

ತುಳುನಾಡಿನ ಸಂಸ್ಕೃತಿಯ ಅಧ್ಯಯನದಲ್ಲಿ ಅಲ್ಲಿನ ಧಾರ್ಮಿಕ ವಿಚಾರಗಳು ಬಹು ಮುಖ್ಯವಾಗಿ ಪಾತ್ರವಹಿಸುತ್ತದೆ. ಪ್ರಾಚೀನ ಕಾಲದಿಂದಲೂ ಸಮಾಜದ ಬೇರೆ ಬೇರೆ ಜನರೊಂದಿಗೆ ಒಂದೊಂದು ಬಗೆಯ ಧಾರ್ಮಿಕ ಆಚರಣೆಗಳು ನಡೆದುಕೊಂಡು ಬಂದಿದೆ. ತುಳುನಾಡಿನ ಸಮಾಜದ ತಾತ್ವಿಕ ಮತ್ತು ಸಾಮಾಜಿಕ ನೆಲೆಗಟ್ಟು ರೂಪಿತಗೊಂಡಿರುವುದೇ ಧಾರ್ಮಿಕ ಆಚರಣೆಗಳಿಂದ ಈ ಆಚರಣೆಗಳಿಂದಲೇ ಒಟ್ಟು ಜಾತಿ ವ್ಯವಸ್ಥೆಯನ್ನು ನಿರ್ಧರಿಸಲಾಗುತ್ತದೆ. ಕೆಲವೊಂದು ಆಚರಣೆಗಳನ್ನು ಸಮಾಜದಲ್ಲಿ ಸಾಮೂಹಿಕವಾಗಿ ಆಚರಿಸುತ್ತಿದ್ದರೆ, ಇನ್ನು ಕೆಲವು ಆಯಾ ಜಾತಿಗೆ ಸಂಬಂಧಪಟ್ಟ ಧಾರ್ಮಿಕ ಆಚರಣೆಯಾಗುತ್ತದೆ. ಈ ಧಾರ್ಮಿಕ ಆಚರಣೆಗಳು ಕೇವಲ ನಂಬಿಕೆಯ ಪ್ರಶ್ನೆ ಮಾತ್ರ ಆಗದೆ ಅದು ಒಂದು ಪ್ರದೇಶದ ಜನರ ಬದುಕಿನ ವಿವಿಧ ಮುಖಗಳನ್ನು ತೋರಿಸುವ ಮಾಧ್ಯಮವೂ ಆಗುತ್ತದೆ. ತುಳುನಾಡಿನಲ್ಲಿ ಧಾರ್ಮಿಕ ಆಚರಣೆಗಳು ಹೇಗೆ ನಡೆದುಕೊಂಡು ಬಂದಿದೆ ಎನ್ನುವುದಕ್ಕೆ ಕೆ. ಮೋಹನ್‌ಕೃಷ್ಣ ರೈಯವರು ಎರಡು ರೀತಿಯ ಪ್ರತಿಕ್ರಿಯೆಗಳನ್ನು ಗುರುತಿಸಿಕೊಳ್ಳುತ್ತಾರೆ. ಅವುಗಳೆಂದರೆ,

೧) ತುಳುನಾಡಿನ ಕೆಳ ವರ್ಗದ ಜನರು ತಮ್ಮ ವೃತ್ತಿಯನ್ನಾಗಿ ಧಾರ್ಮಿಕ ಆಚರಣೆಗಳನ್ನು ಮುಂದುವರಿಸಿಕೊಂಡು ಬಂದಿರುವುದು. ಇಲ್ಲಿ ಮೇಲ್ವರ್ಗದವರ ಜನರ ವಿರುದ್ಧದ ಧ್ವನಿ ಕಾಣಿಸಿಕೊಂಡರೂ, ಮೇಲ್ವರ್ಗದ ಜನರ ಪ್ರಾತಿನಿಧ್ಯದಲ್ಲೇ ಧಾರ್ಮಿಕ ಆಚರಣೆಗಳು ನಡೆಯುತ್ತದೆ.

೨) ಶ್ರೀಮಂತ ವರ್ಗ ತನ್ನ ಅಧಿಕಾರ ಮತ್ತು ಸವಲತ್ತುಗಳನ್ನು ಕಾಯ್ದುಕೊಳ್ಳಲು ಧಾರ್ಮಿಕ ಆಚರಣೆಗಳನ್ನು ಸಾಧನವನ್ನಾಗಿ ಬಳಸಿಕೊಂಡಿದೆ. ತನ್ನ ಅಂತಸ್ತಿಗೆ ಸರಿಹೊಂದುವಂತೆ ಧಾರ್ಮಿಕ ಆಚರಣೆಗಳನ್ನು ನಡೆಸುತ್ತದೆ. ಇದೊಂದು ಸಮಾಜದಲ್ಲಿ ಪ್ರತಿಷ್ಠೆ ಮತ್ತು ಗೌರವವನ್ನು ಸಂಪಾದಿಸುವ ಪ್ರಯತ್ನವೇ ಹೊರತು ಸಾಮಾಜಿಕ ಸಂಬಂಧಗಳ ಪ್ರಶ್ನೆಯಾಗಿಲ್ಲ. ಇದನ್ನು ಶ್ರೀಮಂತ ವರ್ಗದ ಸಾಂಸ್ಕೃತಿಕ ರಾಜಕೀಯ ಎಂದಷ್ಟೇ ಕರೆಯಬಹುದು. (ತುಳು ಸಂಸ್ಕೃತಿ-ಚತುರ್ಮುಖೀ ಅಧ್ಯಯನ ೧೯೯೯, ೪೨) ಇವರ ಅಭಿಪ್ರಾಯದಂತೆ ತುಳುನಾಡಿನ ಧಾರ್ಮಿಕ ಆರಾಧನೆಗಳಿಂದ ಭೂತಾರಾಧನೆ, ಯಕ್ಷಾರಾಧನೆ ಮತ್ತು ಕೆಲವು ಜಾನಪದ ಕುಣಿತಗಳಲ್ಲಿ ರಾಜಕೀಯ ಕಂಡುಬರುತ್ತದೆ.

ತುಳುನಾಡಿನ ಧಾರ್ಮಿಕ ಆಚರಣೆಗಳಲ್ಲಿ ಭೂತಾರಾಧನೆ ಹಾಗೂ ನಾಗಾರಾಧನೆ ವಿಶಿಷ್ಟವಾದ ಸ್ಥಾನವಿದೆ. ಹಿಂದಿನಿಂದಲೂ ಇವೆರಡೂ ತುಳು ಸಂಸ್ಕೃತಿಯ ಒಂದು ಭಾಗವಾಗಿ ನಡೆದುಕೊಂಡು ಬಂದಿದೆ. ಭೂತಾರಾಧನೆಯ ತುಳುನಾಡಿನ ಬದುಕನ್ನು ನಿರ್ದೇಶಿಸಿರುವುದನ್ನು

ಇದರ ಪಾಡ್ದನಗಳಲ್ಲಿ ಕಾಣಬಹುದು. ತುಳುನಾಡಿನ ಸಂಸ್ಕೃತಿಯನ್ನು ಪ್ರತಿನಿಧಿಸುವಲ್ಲಿ ಪಾಡ್ದನಗಳೂ ಮುಖ್ಯವಾಗುತ್ತದೆ. ಬೇರೆ ಬೇರೆ ಭೂತಗಳಿಗೆ ಸಂಬಂಧಪಟ್ಟ ಆರಾಧನೆಗಳಲ್ಲಿಯೂ, ಹಳ್ಳಿಗಳಲ್ಲಿ ಜನರು ವ್ಯವಸಾಯ ಮಾಡುವಾಗಲೋ ಈ ಪಾಡ್ದನಗಳು ಹಾಡಲ್ಪಡುತ್ತದೆ. ಇವು ಭೂತದ ಚರಿತ್ರೆಗಳನ್ನು ತಿಳಿಸುವುದರ ಜೊತೆಗೆ ತುಳುನಾಡ ಸಂಸ್ಕೃತಿ, ಜನರು ಅಮಾನುಷ ಶಕ್ತಿಗಳಾಗಿ, ದೈವದ ರೂಪದಲ್ಲಿ ಕಾಣಿಸಿಕೊಂಡ ಸಂದರ್ಭವನ್ನು ತಿಳಿಸುತ್ತದೆ. ತುಳುನಾಡಿನಲ್ಲಿ ದೇವಸ್ಥಾನ ಮತ್ತು ದೈವಸ್ಥಾನಗಳಿಗೆ ಬಹಳ ನಿಕಟವಾದ ಸಂಬಂಧವಿದೆ. ಪ್ರತಿ ದೇವಾಲಯಕ್ಕೂ ದೈವಸ್ಥಾನಗಳ ಗುಡಿಯಿರುವುದನ್ನು ಕಾಣುತ್ತೇವೆ. ವರ್ಷಾವಧಿ ಉತ್ಸವವು ದೇವಸ್ಥಾನದಲ್ಲಿ ನಡೆದ ಬಳಿಕ ದೈವಗಳ ನೇಮೋತ್ಸವವು ನಡೆಯುತ್ತದೆ. ಈಗಾಗಲೇ ನಮ್ಮಲ್ಲಿ ಕೆಲವು ದೇವಸ್ಥಾನಗಳಲ್ಲಿ ದೈವಸ್ಥಾನ ಗುಡಿಗಳು ಇಲ್ಲದಿದ್ದರೂ, ಆಧುನಿಕ ದಿನಗಳಲ್ಲಿ ಅಷ್ಟಬಂಧ ಬ್ರಹ್ಮಕಲಶೋತ್ಸವ ಆದ ಮೇಲೆ ಆ ದೇವಸ್ಥಾನಕ್ಕೆ ಸಂಬಂಧಪಟ್ಟ ದೈವಗಳು ಕಾಣಿಸಿಕೊಂಡವು. ಆ ಮೂಲಕ ಅವುಗಳನ್ನು ಆರಾಧಿಸಿಕೊಂಡು ಬರುವ ಸಂಪ್ರದಾಯವು ನಮ್ಮಲ್ಲಿ ಕಾಣಿಸಿಕೊಂಡಿದೆ. ಜಾನಪದ ವಿದ್ವಾಂಸರುಗಳು ಅಭಿಪ್ರಾಯ ಪಟ್ಟಂತೆ ತುಳುನಾಡಿನಲ್ಲಿ ಕಡಿಮೆಯೆಂದರೂ ೪೦೦ ಭೂತಗಳನ್ನು ಹೆಸರಿಸಬಹುದು.

ತುಳುನಾಡಿನಲ್ಲಿ ಆರಾಧಿಸಲ್ಪಡುವ ಪ್ರಸಿದ್ಧ ದೈವಗಳೆಂದರೆ ಗುಳಿಗ, ಪಂಜುರ್ಲಿ, ಕಲ್ಲುರ್ಟಿ, ಕಲ್ಕುಡ, ಜುಮಾದಿ, ರಾಜನ್ ದೈವ, ಮಲರಾಯ, ಪೂಮಾಣಿ, ಕಿನ್ನಿಮಾಣಿ, ಪಿಲಿಚಾಮುಂಡಿ, ಅಣ್ಣಪ್ಪ, ಕೊಡಮಣಿತ್ತಾಯ, ಬಬ್ಬರ್ಯ, ಸಿರಿ, ಕೊರಗತನಿಯ, ಕೋಟಿ ಚೆನ್ನಯ, ಲಕ್ಕೇಸಿರಿ, ಮೊಗೇರ್ಲು ಇತ್ಯಾದಿ. ಇವುಗಳಲ್ಲಿ ಕೆಲವು ಭೂತಗಳು ಕನ್ನಡದಲ್ಲಿಯೂ ನುಡಿಗಳನ್ನು ಕೊಡುತ್ತವೆ. ತುಳುನಾಡಿನ ಭೂತಾರಾಧನೆಯು ಕೇವಲ ಧಾರ್ಮಿಕ ವಿಚಾರ ಮಾತ್ರವಾಗಿರದೆ ಸಾಮಾಜಿಕ ಸಾಂಸ್ಕೃತಿಕ ವಿಚಾರಗಳನ್ನು ಒಳಗೊಂಡಿರುತ್ತದೆ.

ಆಧುನಿಕ ಯುಗದಲ್ಲೂ ತನ್ನ ಮೂಲ ಆಶಯವನ್ನು ಇಟ್ಟುಕೊಂಡು ಬಹಳ ವಿಜ್ರಂಭಣೆಯಿಂದ ಧಾರ್ಮಿಕ ಆಚರಣೆಗಳು ನಡೆಯುತ್ತಾ ಬಂದಿದೆ. ಸ್ವರೂಪದಲ್ಲಿ ಬದಲಾದರೂ ಮೂಲ ಆಶಯವನ್ನು ಬಿಟ್ಟಿಲ್ಲ. ಸಾಮಾಜಿಕವಾಗಿ ಕೆಳಸ್ತರದಲ್ಲಿರುವ ಜನರು ಭೂತಾರಾಧನೆಯನ್ನು ಮಾಡುವವರಾದರೆ, ನಡೆಸುವವರು ಮೇಲ್ವರ್ಗದವರು. ಆರ್ಥಿಕ ಕಾರಣಗಳಿಗೋಸ್ಕರವಾಗಿ ಇದನ್ನು ಒಂದು ವೃತ್ತಿಯನ್ನಾಗಿ, ಮಾಡಿಕೊಂಡು ಬಂದ ಈ ಆಚರಣೆಯು ಇವತ್ತು ಅವರಲ್ಲಿ ಒಂದು ನಂಬಿಕೆಯ ವಿಷಯವಾಗಿ ಮಾರ್ಪಟ್ಟಿದೆ. ಈ ಆಚರಣೆಯನ್ನು ತಾವೇ ಕೈಗೊಳ್ಳಬೇಕಾದುದು ಅನಿವಾರ್ಯವೆಂಬಂತೆ, ನಮಗೇ ಮೀಸಲು ಎಂಬಂತೆ ಒಂದು ಸ್ಥಾಪಿತ ಶಕ್ತಿಯಾಗಿ ರೂಪುಗೊಂಡಿದೆ. ಪ್ರಾಚೀನ ಕಾಲದಿಂದಲೂ ಮೇಲ್ವರ್ಗದವರಿಗೆ ಇದು ಪ್ರತಿಷ್ಠಿತ ವಿಚಾರವಾಗಿಯೇ ಉಳಿದುಕೊಂಡು ಬಂದಿದೆ. ಕೆ.

ಮೋಹನ್ ಕೃಷ್ಣ ರೈಯವರು ಹೇಳುವಂತೆ ಮೇಲ್ವರ್ಗದವರು ಜಾತಿ ವ್ಯವಸ್ಥೆಯನ್ನು ಯಥಾ ಪ್ರಕಾರ ಮುಂದುವರಿಸಿಕೊಂಡು ಹೋಗುವ ಉದ್ದೇಶವೂ ಇದರಲ್ಲಿದೆ. ಇಂದಿನ ದಿನಗಳಲ್ಲಿ ಆರಾಧನೆಗಳಲ್ಲಿ ಭಕ್ತಿ ಕಡಿಮೆಯಾಗುತ್ತಿದ್ದು, ಕೇವಲ ತಮ್ಮ ಸಾಮಾಜಿಕ ಪ್ರತಿಷ್ಠೆಯ ವಿಷಯವಾಗಿ ಕಂಡು ಬರುತ್ತದೆ. ಶ್ರೀಮಂತರು ತಮ್ಮ ಶ್ರಿಮಂತಿಕೆಯನ್ನು ಪ್ರದರ್ಶಿಸುವ ಒಂದು ವಿಷಯವೂ ಆಗಿದೆ ಎಂದರೆ ತಪ್ಪಾಗಲಾರದು. ಏನೇ ಆದರೂ ವೈಜ್ಞಾನಿಕ ಯುಗದಲ್ಲಿಯೂ ಈ ಆರಾಧನೆ ಕಲೆ ಮೂಲ ಆಶಯದೊಂದಿಗೆ ಉಳಿದುಕೊಂಡು ಬಂದಿರುವುದು ತುಳು ಸಂಸ್ಕೃತಿಗೆ ಒಂದು ಕಿರೀಟವೇ ಸರಿ.

ತುಳುನಾಡಿಗೆ ಮಾತ್ರ ಸೀಮಿತವಾಗಿರದೆ, ಭಾರತದಾದ್ಯಂತ ಆಚರಿಸುವ ಧಾರ್ಮಿಕ ಆಚರಣೆಗಳಲ್ಲಿ ನಾಗಾರಾಧನೆಯೂ ಒಂದು. ಶ್ರಾವಣ ಶುದ್ದ ಪಂಚಮಿಯಂದು ಈ ಆರಾಧನೆಯನ್ನು ಕೈಗೊಳ್ಳುತ್ತಾರೆ. ತುಳುನಾಡಿನಲ್ಲಿ ನಾಗದಪಂಚಮಿಯಂದು ಇದನ್ನು ಕರೆಯುತ್ತಾರೆ. ಇದು ಅಣ್ಣ ತಂಗಿಯರ ಹಬ್ಬವೂ ಹೌದು. ಇದೊಂದು ಧರ್ಮ ಸಂಬಂಧಿ ಆಚರಣೆ ಆದರೆ ಜಾತಿ ಸಂಬಂಧಿ ಆಚರಣೆಯಲ್ಲ. ನಾಗರ ಪಂಚಮಿಯಂದು ನಾಗಗಳಿಗೆ ನಡೆಯುವ ವಿಶೇಷ ಸೇವೆಗೆ ನಾಗತಂಬಿಲ ಎಂದು ಕರೆಯುತ್ತಾರೆ. ವೈದಿಕ ಆಚರಣೆಯನ್ನು ಹೋಲುವ ಈ ಆರಾಧನೆಯಲ್ಲಿ ನಾಗನನ್ನು ಸಮೃದ್ಧಿಯ ಸಂಕೇತವಾಗಿಯೂ, ದೋಷಗಳ ಪರಿಹಾರಕನಾಗಿಯೂ ಜನರು ಆರಾಧಿಸುತ್ತಾ ಬಂದಿದ್ದಾರೆ.

ನಾಗನ ಕುರಿತಾಗಿ ಜನರಲ್ಲಿ ಅನೇಕ ನಂಬಿಕೆಗಳಿವೆ. ತುಳುನಾಡಿನಲ್ಲಿ ಪ್ರತಿ ಮನೆಗೊಂದರಂತೆ ನಾಗಬನಗಳು ಇರುವುದುಂಟು. ಇದರಲ್ಲಿ ವಿವಿಧ ಭಂಗಿಗಳಲ್ಲಿರುವ ನಾಗಶಿಲ್ಪಗಳಿರುತ್ತವೆ. ಪ್ರತಿಯೊಂದು ದೇವಸ್ಥಾನಕ್ಕೆ ಸಂಬಂಧಪಟ್ಟಂತೆ ಭೂತಸ್ಥಾನಗಳು ಇರುವ ಹಾಗೆ ನಾಗಬನ ಅಥವಾ ನಾಗ ಪ್ರತಿಷ್ಠೆಗಳು ಇದ್ದೇ ಇರುತ್ತದೆ. ತುಳುನಾಡಿನ 'ಆಲಡೆ' ಅಥವಾ 'ಬ್ರಹ್ಮಸ್ಥಾನ' ಎಂದು ಕರೆಯುವ ವಿಶಿಷ್ಟ ಸ್ಥಳಗಳಲ್ಲಿ ಮುಖ್ಯವಾಗಿ ನಾಗ, ಬ್ರಹ್ಮ, ನಂದಿ(ನಂದಿಗೋಣ) ರಕ್ತೇಶ್ವರಿ ಹಾಗೂ ಕ್ಷೇತ್ರಪಾಲ ಎಂಬ ಶಕ್ತಿಗಳನ್ನು ಸಮಷ್ಟಿಯಾಗಿ ಪೂಜಿಸುವ ಸಂಪ್ರದಾಯವಿದೆ. (ತುಳುವ ಜಾನಪದ : ಕೆಲವು ನೋಟಗಳು ೨೦೦೭, ೧೯) ದಕ್ಷಿಣ ಕನ್ನಡದಲ್ಲಿ ಮುಖ್ಯವಾಗಿ ಕುಕ್ಕೆ ಸುಬ್ರಹ್ಮಣ್ಯ, ಕುಡುಪು, ಬಳ್ಳಮಂಜಗಳಲ್ಲಿ ನಾಗನನ್ನು ವಿಶೇಷವಾಗಿ ಆರಾಧನೆ ಮಾಡುತ್ತಾರೆ. ಬೇರೆ ಬೇರೆ ವಸ್ತುಗಳನ್ನು ಸಮರ್ಪಿಸುತ್ತಾರೆ ಮತ್ತು ಬೇರೆ ಬೇರೆ ಸೇವೆಗಳನ್ನು ಕೈಗೊಳ್ಳುತ್ತಾರೆ. ಹೆಚ್ಚಿನ ವಿವರಗಳನ್ನು ಮುಂದಿನ ಅಧ್ಯಾಯದಲ್ಲಿ ಕೊಡಲಾಗಿದೆ.

ಭೂತಾರಾಧನೆ, ನಾಗಾರಾಧನೆಯಂತೆಯೇ ಸಿರಿಯಾರಾಧನೆಯೂ ಒಂದು ಧಾರ್ಮಿಕ ಆಚರಣೆಯಾಗುತ್ತದೆ. ಇಲ್ಲಿ ಸಿರಿಯು ಅನುಭವಿಸಿದ ನೋವಿನ ವಿವರಗಳು ಇದರ ಪಾಡ್ದನದಲ್ಲಿ ಕಂಡುಬರುತ್ತದೆ. ಪುರುಷ ಕೇಂದ್ರಿತ ವ್ಯವಸ್ಥೆಯ ದಬ್ಬಾಳಿಕೆಯ ವಿರುದ್ಧ ತನ್ನ ಹಕ್ಕಿಗಾಗಿ

ಹೋರಾಡಿದ, ಆ ಮೂಲಕ ದುರಂತ ಜೀವನವನ್ನು ಕಂಡ ಒಂದು ಹೆಣ್ಣಿನ ವಿವರಣೆ ಇಲ್ಲಿದೆ. ಪ್ರಧಾನವಾಗಿ ಸಿರಿ ಆರಾಧನೆಯಲ್ಲಿ ಸ್ತ್ರೀಯರೇ ಕಂಡು ಬರುತ್ತಾರೆ. ಸಾಮೂಹಿಕ ದೈವಾವೇಶದ ವಿಶೇಷತೆಯುಳ್ಳ ಸಿರಿ ಜಾತ್ರೆಯು ದಕ್ಷಿಣ ಕನ್ನಡದ ಕವತ್ತಾರು, ನಂದಳಿಕೆ, ಹಿರಿಯಡ್ಕದಲ್ಲಿ ನಡೆಯುತ್ತದೆ. ಅನೇಕ ಮಾನಸಿಕ ಸಮಸ್ಯೆಗಳಿಗೆ ಒಂದು ರೀತಿಯ ಪರಿಹಾರ ಇಲ್ಲಿ ದೊರೆಯುತ್ತದೆ. ತುಳುನಾಡಿನಲ್ಲಿ ಧಾರ್ಮಿಕ ಆಚರಣೆಗಳೊಡನೆ ಸಂಬಂಧವನ್ನು ಇಟ್ಟುಕೊಂಡಿರುವ ಕೆಲವು ಜಾನಪದ ಆಚರಣೆ, ಕುಣಿತಗಳು ಇದ್ದರೂ ಇದರಲ್ಲಿ ಧಾರ್ಮಿಕ ಆಚರಣೆ ಸಂಬಂಧಿ ವಿಚಾರಗಳು ವಿಶೇಷವಾಗಿ ಕಂಡುಬರುವುದಿಲ್ಲ. ಪದ್ಧತಿಗಳು, ಹಾಗೂ ನಂಬಿಕೆಗಳು ತುಳುನಾಡಿನ ಸಂಸ್ಕೃತಿಯ ಮುಖ್ಯವಾದ ಭಾಗವಾಗುತ್ತದೆ.

ಮನುಷ್ಯ ಸಮಾಜ ಜೀವಿ. ಆತ ಒಬ್ಬಂಟಿಗನಾಗಿ ಬಾಳಲಾರ. ವಿವಿಧ ಜಾತಿ, ಧರ್ಮದ ಜನರಿರುವಂತಹ ನಾಡು ನಮ್ಮ ತುಳುನಾಡು. ಈ ಪರಿಸರದ ಜನರು ಎಷ್ಟು ಸಾಮರಸ್ಯದಿಂದ ಬಾಳಿ ಬದುಕುತ್ತಿದ್ದರು, ಸಾಂಸ್ಕೃತಿಕ ಸಂಬಂಧಗಳನ್ನು ಇಟ್ಟುಕೊಂಡಿದ್ದರು ಎಂಬುದು ಇಲ್ಲಿನ ಧಾರ್ಮಿಕ ಆಚರಣೆಗಳ ಸಂದರ್ಭದಲ್ಲಿ ಕಂಡು ಬರುತ್ತದೆ. ಭೂತೋತ್ಸವ ಸಂದರ್ಭಗಳಲ್ಲಿ ಊರಿನ ಬೇರೆ ಬೇರೆ ಜಾತಿಯ ಜನರು, ಆ ಜಾತಿಗೆ ಸೇರಿದ ಪ್ರತಿನಿಧಿಗಳು ಮಾಡಬೇಕಾದ ಕೆಲವು ನಿಶ್ಚಿತ ಕರ್ತವ್ಯಗಳು ಪರಂಪರೆಯಿಂದ ನಿಗದಿಗೊಳಿಸಲ್ಪಟ್ಟಂತೆ ಚರ್ಚಿತವಾಗಿವೆ. ಎಲ್ಲಾ ವರ್ಗಗಳ ಪ್ರತಿನಿಧಿಗಳು ಒಂದೆಡೆ ಕಲೆತು ನಡೆದುಕೊಳ್ಳುವ ಈ ವ್ಯವಸ್ಥೆಯ ಹಿಂದೆ ಸಹಕಾರ ಪ್ರವೃತ್ತಿ, ತ್ಯಾಗ, ಸಮಾಜ ಪ್ರೇಮ, ಸಾಮೂಹಿಕ ಕ್ಷೇಮ, ಚಿಂತನ ಮುಂತಾದ ಮೌಲ್ಯಗಳು ಸೇರಿಕೊಂಡಿದೆ. ದಾನ, ಧರ್ಮ, ಪುಣ್ಯ ಸೇವೆ ಎಂಬ ಭವ್ಯ ಕಲ್ಪನೆಗಳು ಇಂತಹ ಸಂದರ್ಭಗಳಲ್ಲಿ ಘನತೆಯನ್ನು ಹೊಳಪನ್ನೂ ನೀಡುತ್ತದೆ ಎನ್ನುವ ವಿಚಾರವನ್ನು ಇಲ್ಲಿ ಅಲ್ಲಗಳೆಯುವಂತಿಲ್ಲ. ಆ ಮೂಲಕ ತುಳುನಾಡಿನ ಸಮಾಜದ ಬೇರೆ ಬೇರೆ ಜಾತಿ ವರ್ಗದ ಜನರ ಉಲ್ಲೇಖಗಳು, ಅವರ ಕೆಲಸದ ವಿವರಗಳು ಇಲ್ಲಿ ದಾಖಲೀಕರಣಗೊಂಡಿವೆ. ಜಾತಿ ಜಾತಿಗಳ ಮಧ್ಯೆ ಇರುವ ಸಾಮರಸ್ಯದ ಬದುಕಿನ ಹಲವು ನೋಟಗಳು ಇಲ್ಲಿ ಕಂಡು ಬರುತ್ತದೆ. ಈಗಿನ ಆಧುನೀಕರಿಗೆ ಮರೆತೇ ಹೋಗಿರುವ ಅನೇಕ ಕಟ್ಟು ಪಾಡುಗಳನ್ನು ಮತ್ತೆ ನೆನಪಿಸಿಕೊಂಡಿರುವುದರ ಮೂಲಕ ನೀರ್‌ಮರ್ಗದ ಅವರು ತುಳುಸಂಸ್ಕೃತಿಗೆ ಜೀವ ತುಂಬಿದ್ದಾರೆ. ಗತಕಾಲದ ಸಂಸ್ಕೃತಿಯನ್ನು ಮರುವ್ಯಾಖ್ಯಾನಿಸುವ ರೀತಿಯೂ ಇದು ಹೌದು. ಸಾಂಪ್ರದಾಯಿಕವಾದ ಧಾರ್ಮಿಕ ರಂಗಭೂಮಿಯ ಅನೇಕ ಮಗ್ಗುಲುಗಳು ಇಲ್ಲಿವೆ. ನಂಬಿಕೆ ಕೂಡಾ ಸಂಸ್ಕೃತಿಯ ಒಂದು ಅಂಗ. ಇಲ್ಲಿನ ಆರಾಧನೆಗಳೆಲ್ಲಾ ನಂಬಿಕೆಯ ಮೇಲೆ ನಿಂತಿದೆ. ತುಳುವರು ನಂಬಿಕಸ್ಥರು. ನಂಬಿಕೆ, ವಿಶ್ವಾಸದ ತಳಹದಿಯ ಮೇಲೆ ತುಳು ಸಮಾಜ ನಿರ್ಮಾಣ ಗೊಂಡಿದೆ.

## ೪.೧ ಭೂತಾರಾಧನೆ

ತಲೆಮಾರಿನಿಂದ ತಲೆಮಾರಿಗೆ ಆರಾಧಿಸಿಕೊಂಡು ಬಂದಿರುವ ಸಂಪ್ರದಾಯಗಳಲ್ಲಿ ಭೂತಾರಾಧನೆಯೂ ಒಂದು. ತುಳುನಾಡಿನ ಪ್ರಾಚೀನ ಧಾರ್ಮಿಕ ಸಂಸ್ಕೃತಿಗೆ ಇದೊಂದು ನಿದರ್ಶನವಾಗಿದೆ. ಸಾಮಾನ್ಯವಾಗಿ ಭೂತ ವೇಷದ ಕುಣಿತವನ್ನು ಒಳಗೊಂಡ ಆರಾಧನೆಗೆ `ನೇಮ ಅಥವಾ ಕೋಲ' ಎಂದು ಕರೆಯುತ್ತಾರೆ. ಇಲ್ಲಿ ಬಳಸುವ ಪರಿಕರಗಳಲ್ಲಿ, ಹೆಚ್ಚು ಕೃಷಿ ಸಂಬಂಧಿಯೇ ಆಗಿದೆ. ಮಳೆ ಬಾರದಿದ್ದರೆ ಜಾನುವಾರು ಕಳೆದಹೋದರೆ ಯಾವುದೇ ಕಷ್ಟ ಕಾರ್ಪಣ್ಯಗಳು ಎದುರಾದರೆ, ಯಾವುದೇ ವ್ಯಾಜ್ಯಗಳು ಇದ್ದಾಗ, ಕೌಟುಂಬಿಕವಾದ ಸಮಸ್ಯೆಗಳು ಇದ್ದಾಗ ಭೂತಗಳಿಗೆ ಹರಕೆ ಹೇಳಿ ಕೋಲ ಕೊಡುವ ಸಂಪ್ರದಾಯ ತುಳುನಾಡಿನಲ್ಲಿ ನಡೆದುಕೊಂಡು ಬಂದಿದೆ. ನೇಮ ಅಥವಾ ಕೋಲಕ್ಕೆ ಪುರೋಹಿತರಿಂದ ದಿನನಿಗದಿ ಪಡಿಸಲಾಗುತ್ತದೆ. ಭೂತದ ವೇಷಗಾರಿಕೆಯಲ್ಲಿರುವ ವಿವಿಧ ಬಣ್ಣಗಳನ್ನು ಕಾದಂಬರಿಕಾರರು ಪರಿಚಯಿಸುತ್ತಾರೆ. ಕೆಂಪು ಬಣ್ಣದ ಅಂಗಿ, ಗಗ್ಗರ, ಅಣಿ, ಜಕ್ಕಲಣಿ, ಅರದಾಲ, ತೆಂಗಿನ ಗರಿಗಳ ಮಾಲೆ, ಹಾಳೆ ಇವು ಪ್ರಮುಖ ಆಕರ್ಷಣೆ.

ಭೂತ ಕಟ್ಟುವವನು ಗಗ್ಗರ ಇಟ್ಟೊಡನೆ ಆವೇಶ ಬಂದು ನಡುಗತೊಡಗುತ್ತಾನೆ. ದೀವಟಿಗೆಯಿಂದ ಎದೆಗೆ ಬೆಂಕಿಯಿಟ್ಟುಕೊಳ್ಳುತ್ತಾನೆ. ಇದಕ್ಕೆ ವಾಲಗಬ್ಯಾಂಡ್, ತಾಸೆಗಳ ಹಿಮ್ಮೇಳವಿರುತ್ತದೆ. ಕೆಲವೊಮ್ಮೆ ಆವೇಶ ಬಂದು ನಡುಗಿ ಸ್ಮೃತಿ ತಪ್ಪುವುದು ಅಪರೂಪವಲ್ಲ. ಕ್ಷಣ ಕಾಲವಾದರೂ ಭೂತಕಟ್ಟಿದವನು ಮತ್ತು ಪಾತ್ರಿಗಳು ತಮ್ಮನ್ನು ತಾವು ಮರೆಯುತ್ತಾರೆ. ಇಂಥ ಆವೇಶಗಳೇ ಜನಸಾಮಾನ್ಯರಲ್ಲಿ ಭೂತಾರಾಧನೆಯ ಬಗ್ಗೆ ನಂಬಿಕೆಯನ್ನು ಉಳಿಸಿವೆ.

ತುಳುನಾಡಿನ ಪ್ರಧಾನ ಆರಾಧನಾ ಕಲೆಗಳಲ್ಲಿ ಭೂತಾರಾಧನೆಯೂ ಒಂದು. ನಾಗಾರಾಧನೆಯಂತೆ ಇದೂ ತುಳು ಸಂಸ್ಕೃತಿಯಲ್ಲಿ ಬೆರೆತು ಹೋಗಿದೆ. ತುಳುವರು ಭೂತವನ್ನು `ದೆಯ್ಯೊ' ಎಂದು ಕರೆಯುತ್ತಾರೆ. ವಿದ್ವಾಂಸ ಡಾ. ಅಮೃತ ಸೋಮೇಶ್ವರರವರು ಹೇಳುವಂತೆ – `ನೂರಾರು ವರ್ಷಗಳಿಂದ ತುಳುನಾಡಿನ ಜನರ ಸಾಂಸ್ಕೃತಿಕ ಬದುಕನ್ನು ನಿರ್ದೇಶಿಸುತ್ತಾ ಬಂದಿರುವ ಭೂತಾರಾಧನಾ ಸಂಪ್ರದಾಯವು ಹಲವಾರು ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿರುವ ವಿಲಕ್ಷಣ ಬೆಸುಗೆಯಾಗಿದೆ. ಈ `ಧಾರ್ಮಿಕ ರಂಗಭೂಮಿ'ಯಲ್ಲಿ ಆರಾಧನಾಂಶದ ಜೊತೆಗೆ ಕಲಾತ್ಮಕತೆ, ಮನರಂಜನೆ, ನ್ಯಾಯ ತೀರ್ಮಾನ, ಮನೋವೈದ್ಯ, ಸಾಮಾಜಿಕ ಭಾವೈಕ್ಯ ಮೊದಲಾದ ಹಲವು ಅಂಶಗಳು ಬೆಸೆದುಕೊಂಡಿದ್ದು, ಅಧ್ಯಯನಾಸಕ್ತರಿಗೆ ವಿಪುಲಸಾಮಗ್ರಿಯನ್ನು ಈ ಸಂಕೀರ್ಣ ವ್ಯವಸ್ಥೆಯು ಒದಗಿಸ ಬಲ್ಲುದಾಗಿದೆ.' (ಡಾ. ಅಮೃತ ಸೋಮೇಶ್ವರ: ದೈವರಾಧನೆಯಲ್ಲಿ ಭಾವೈಕ್ಯ;೨೦೦೬,೯೫) ಎಂಬೀ ವಿಚಾರಗಳು ಭೂತಾರಾಧನೆಯ ಕುರಿತಾಗಿನ ಮಹತ್ವವನ್ನು ತಿಳಿಸುತ್ತದೆ. ತುಳುನಾಡಿನ ನಲಿಕೆ, ಪರವ, ಪಂಬದ, ಜಾತಿಯ ಜನರು ಭೂತಾರಾದನೆಯಲ್ಲಿ ಮಹತ್ವದ ಪಾತ್ರವಹಿಸುತ್ತಾರೆ.

ತುಳುನಾಡಿನಲ್ಲಿ ನೂರಾರು ಭೂತಗಳಿಗೆ ಆರಾಧನೆಯನ್ನು ಮಾಡಲಾಗುತ್ತದೆ.

ಆಧುನಿಕ ದಿನಗಳಲ್ಲಿಯೂ ತುಳುನಾಢಿನಲ್ಲಿ ಭೂತಾರಾಧನೆ ಸಂಪ್ರದಾಯದಂತೆ ಬಹಳಷ್ಟು ವಿಧಿವಿಧಾನಗಳೊಂದಿಗೆ ನಡೆದುಕೊಂಡು ಬರುವ ಸನ್ನಿವೇಶಗಳನ್ನು ನೋಡಿದಾಗ ಭೂತಾರಾಧನೆಯ ಸಂಪ್ರದಾಯವು ಇಲ್ಲಿನ ಜನತೆಯಲ್ಲಿ ಎಷ್ಟು ಆಳವಾಗಿ ಬೇರು ಬಿಟ್ಟ ಒಂದು ಸಂಸ್ಕೃತಿಯಾಗಿದೆ ಎಂಬುದು ಅರಿವಾಗುತ್ತದೆ. ಇದೊಂದು ಸಾಮೂಹಿಕ ಮತ್ತು ಸಾಂಸ್ಕೃತಿಕ ಕಲೆಯಾಗಿದೆ. ಯಾಕೆಂದರೆ ಈ ಆರಾಧನೆಯ ಸಂದರ್ಭದಲ್ಲಿ ಸಮಾಜದಲ್ಲಿರುವ ಎಲ್ಲಾ ವರ್ಗದಜನರ ಪ್ರತಿನಿಧಿಯೊಬ್ಬನು ಮಾಡಲೇಬೇಕಾದ ಕರ್ತವ್ಯಗಳು ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಆದ್ದರಿಂದ ಎಲ್ಲಾ ವರ್ಗದ ಜನರು ಇಲ್ಲಿ ಸೇರಬೇಕಾದ ಸಂದರ್ಭವಿರುವುದರಿಂದ ಇದೊಂದು ಸಮಷ್ಠಿಯ ಪ್ರಜ್ಞೆಯಾಗಿದೆ ಎಂದು ಹೇಳಬಹುದು. ಭೂತದ ಅಭಯವಾಕ್ಯಗಳಲ್ಲಿ ಒಕ್ಕಟ್ಟು, ಒಮ್ಮತಗಳ ವಿಚಾರ ಅನೇಕ ವೇಳೆ ಕಾಣಿಸಿಕೊಳ್ಳುತ್ತದೆ. ಅಷ್ಟೇ ಅಲ್ಲದೆ ದೈವವು ಜಾತಿ, ಧರ್ಮ, ವರ್ಗಭೇದವನ್ನು ಬಿಟ್ಟು ಸರ್ವರಿಗೂ ಶುಭವನ್ನು ನುಡಿಯುತ್ತದೆ.

ಭೂತಾರಾಧನೆಯ ದೃಷ್ಟಿಯಲ್ಲಿ ತುಳುವ ಸಂಸ್ಕೃತಿಯ ಪ್ರತಿನಿಧೀಕರಣವನ್ನು ಶ್ರೀ ನೀರುಮಾರ್ಗರವರ ತಿಲ್ಲಾಸ್' ಮತ್ತು ಮಾದಿರ ಕಾದಂಬರಿಗಳಲ್ಲಿ ಗುರುತಿಸಬಹುದು. ತಿಲ್ಲಾಸ್' ಕಾದಂಬರಿ ಸಂಪೂರ್ಣವಾಗಿ ಭೂತಾರಾಧನೆಯ ಕುರಿತಾಗಿಯೇ ರಚಿತವಾದ ಕೃತಿಯಾಗಿದೆ. ಉಳಿದಂತೆ ಸಾಂದರ್ಭಿಕವಾಗಿ ಉಳಿದ ಕಾದಂಬರಿಗಳಲ್ಲಿ ಭೂತಾರಾಧಣೆಯನು ಕುರಿತು ವಿವರಗಳು ತುಳುವ ಸಂಸ್ಕೃತಿಯನ್ನು ಪರಿಚಯಿಸುವ ಸಂದರ್ಭದಲ್ಲಿ ವ್ಯಕ್ತವಾಗುತ್ತದೆ.

ಭೂತಾರಾಧನೆ ಮೂಲಭೂತವಾಗಿ ಒಂದು ಆವೇಶಭರಿತ ರಂಗ ಸಂಪ್ರದಾಯವಾಗಿರುವುದರಿಂದ ಈ ಕುಣಿತಗಳಲ್ಲಿ ಶಾಸ್ತ್ರೀಯ ರೀತಿಯ ಹೆಜ್ಜೆಗಾರಿಕೆ ಇಲ್ಲ. ಸಂದರ್ಭಕ್ಕೆ ತಕ್ಕಂತೆ ವಾದ್ಯ ಸಮ್ಮೇಳಗಳ ಹಿಮ್ಮೇಳದಲ್ಲಿ ಸ್ವಯಂಪ್ರೇರಿತ ಆವೇಶ ತಂದುಕೊಂಡು ಕಲಾವಿದ ಕುಣಿಯುತ್ತಾನೆ. ಅಡ್ಡನಲಿಕೆ, ಪೊಲಿ ನಲಿಕೆ, ಬಲಿಸುತ್ತು ನಲಿಕೆ, ಅಂಗಣ ಬಲಿ ನರ್ತನ, ವಾಲಸರಿ ಪಯ್ಯೋಲಿ ಇಂತಹ ಪ್ರಭೇದಗಳನ್ನು ಕುಣಿತದಲ್ಲಿ ಗುರುತಿಸಬಹುದಾಗಿದೆ. ಕೆಲವು ಘಟ್ಟಗಳಲ್ಲಿ ಪ್ರೀತ್ಯರ್ಥದ ಸೌಮ್ಯವಾದ ಸಾಹಸ, ಶೌರ್ಯ ಕಾರಣಿಕ ತೋರುವ ಉಗ್ರ ನರ್ತನ ನಡೆಯುತ್ತದೆ. ಸಿಟ್ಟು ಅಸಹನೆ, ಅತೃಪ್ತಿ, ಸಾಂತ್ವಾನ ಮೆಚ್ಚುಗೆ, ಒಲವು ಸೂಚಿಸುವ ಭಾಗಗಳೂ ಇವೆ. ಉಗ್ರತೆ ಮತ್ತು ಗತ್ತುಗಾರಿಕೆ ಕುಣಿತದ ಪ್ರಧಾನ ಅಂಶಗಳು. ಕುಣಿತ ಹೆಚ್ಚು ಪ್ರಾಚೀನ ಮತ್ತು ಸೂಕ್ಷ್ಮತರ ಎಂಬುದಕ್ಕೆ ಭೂತಕೋಲ ಉತ್ತಮವಾದ ಒಂದು ಆಧಾರವಾಗಿದೆ' (ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ : ಸಂವಹನ ಮಾಧ್ಯಮವಾಗಿ ಜನಪದ ಕುಣಿತಗಳು; ೧೯೯೯, ೫೫) ಹೀಗೆ ಭೂತಗಾರಿಕೆಯ ಕುಣಿತದಲ್ಲಿ ಇರುವ ಸೂಕ್ಷ್ಮ ವಿಚಾರಗಳು ಪೂರಕವಾದ ಸನ್ನಿವೇಶಗಳು ನೀರ್ ಮಾರ್ಗ ಅವರ

ಕಾದಂಬರಿಗಳಲ್ಲಿ ಕಂಡು ಬರುತ್ತದೆ.

ಭೂತ-ಕೋಲ-ನೇಮ ಎಂಬ ಈ ಪಾರಿಭಾಷಿಕ ಪದಗಳು ಆರಾಧನೆಯ ವಲಯಕ್ಕೆ ಸಂಬಂಧಿಸಿದ್ದು. ಇಲ್ಲಿ ಕಣ್ಣಿಗೆ ಕಾಣದ ಭೂತಕ್ಕೆ ಕಲ್ಪನೆಯ ಸ್ವರೂಪವನ್ನು ನೀಡಿ ವೇಷ ಭೂಷಣವನ್ನು ತೊಟ್ಟು, ಆಯುಧಧಾರಿಗಳಾಗಿ ಕ್ರಮಬದ್ಧವಾಗಿ ಕುಣಿದಾಗ ಅದು ಭೂತದ ಕುಣಿತವೆಂದೂ, ವಿವಿಧ ಆಚರಣೆಗಳಿಂದ ಕೂಡಿದ ಭೂತದ ಕುಣಿತವನ್ನು ಕೋಲವೆಂದೂ, ಆ ಕೋಲವು ನಿಯಮಬದ್ಧವಾಗಿ ನಡೆಯುವುದರಿಂದ ಅದನ್ನು ನೇಮವೆಂದು ಕರೆಯುತ್ತಾರೆ ಎನ್ನುವ ವಿಚಾರವನ್ನು ಇಲ್ಲಿ ಗಮನದಲ್ಲಿ ಇಟ್ಟುಕೊಳ್ಳಬೇಕಾಗುತ್ತದೆ. ಹಾಗೆಯೇ ಬೇರೆ ಬೇರೆ ಭೂತಗಳಿಗೂ ಬೇರೆ ಬೇರೆ ವೇಷಭೂಷಣಗಳು, ಬಣ್ಣಗಾರಿಕೆಗಳು ಇರುತ್ತದೆ. ಇಲ್ಲಿ ಭೂತವನ್ನು ಕಟ್ಟುವವರು ಸಾಮಾಜಿಕವಾಗಿ ಕೆಳವರ್ಗದವರೆನಿಸಿಕೊಂಡ ಪಂಬದ, ಪರವ, ನಲಿಕೆಯವರಾದರೆ, ಭೂತದ ಪೂಜಾರಿಗಳು ಅಥವಾ ಭೂತವನ್ನು ಆವಾಹಿಸಿಕೊಳ್ಳುವ ವ್ಯಕ್ತಿಗಳು, ಗೌಡ, ಬಂಟ, ಬಿಲ್ಲವ, ಮೂಲ್ಯ ಮೊದಲಾದ ಸಮಾಜಕ್ಕೆ ಸೇರಿದವರಾಗಿರುತ್ತಾರೆ. ಭೂತಾವೇಶಗೊಂಡಾಗ ಸಾಮಾಜಿಕವಾಗಿ ಕೆಳವರ್ಗದ ವ್ಯಕ್ತಿಗಳು ಮೇಲ್ವರ್ಗದವರಿಗೆ ಅಭಯ ನೀಡುವ ವಿಶೇಷ ಶಕ್ತಿಗಳಾಗುತ್ತಾರೆ. ಇಡೀ ಭೂತೋತ್ಸವದಲ್ಲಿ ಇವರು ಪ್ರಧಾನವಾಗುತ್ತಾರೆ. ಇಲ್ಲಿ ಅನೇಕ ಕ್ಲಿಷ್ಟವಾದ ನ್ಯಾಯಗಳಿಗೆ, ಸಮಸ್ಯೆಗಳಿಗೆ ಭೂತಗಳ ಮೇಲಿನ ಭಯ, ಭಕ್ತಿಯಿಂದ ಪರಿಹಾರಗಳು ದೊರಕುತ್ತದೆ. ಭೂತಗಳಲ್ಲಿಯೂ ಬೇರೆ ಬೇರೆ ಸಮಾಜಕ್ಕೆ ಸೇರಿದ ಭೂತಗಳು, ಅವಳಿ ಭೂತಗಳು ಕಂಡು ಬರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳಿಗೂ ಕಾದಂಬರಿಕಾರರು ತಮ್ಮ ಕೃತಿಯಲ್ಲಿ ಬೆಳಕು ಚೆಲ್ಲಿದ್ದಾರೆ. ಇವರ ಮಾದಿರ' ಕಾದಂಬರಿಯಲ್ಲಿ ತುಳು ಸಂಸ್ಕೃತಿಯ ಕುರಿತಂತೆ ಬೇರೆ ಬೇರೆ ವಿವರಗಳನ್ನು ಹೇಳುತ್ತಾ, ಭೂತಾರಾಧನೆಯ ವಿವರಗಳೊಂದಿಗೆ ಗುತ್ತಿನವರ ಕಾರುಬಾರು, ಅಪ್ಪಣ್ಣರ ಗತ್ತು, ಚೋಮ ಹೊಂದಿರುವ ಭಯಭಕ್ತಿ, ಮಕ್ಕಳಿಲ್ಲದಿರುವ ದುಃಖ, ದೈವ ದೇವರ ಪ್ರಸಾದವೆಂಬಂತೆ ದೊರೆಯುವ ಮಗು-ಹೀಗೆ ಬೇರೆ ಬೇರೆ ಮಗ್ಗುಲುಗಳಿಂದ ತುಳು ಸಂಸ್ಕೃತಿಯನ್ನು ಕಾದಂಬರಿಯ ಮುಖೇನ ಮಂಡಿಸುವ ಪ್ರಯತ್ನ ಇಲ್ಲಿದೆ. ಇಲ್ಲಿ ಭೂತ ಕಟ್ಟುವ ಕಾಯಕವನ್ನು ಮಾಡುತ್ತಿರುವ ಚೋಮ ನಲಿಕೆ ಜನಾಂಗಕ್ಕೆ ಸೇರಿದವನು. ಈತನು ಕೋಲ ಕಟ್ಟುವ ಕಾಯಕದಲ್ಲಿ ನಿರತನಾಗಿದ್ದಾಗ ಆತನ ಮಡದಿ 'ಗುಲ್ಲಿ' ಆತನಿಗೆ ನೆರವಾಗುತ್ತಿದ್ದಳು. ಭೂತ ಎಣ್ಣೆ ಬೂಳ್ಯ ತೆಗೆದುಕೊಳ್ಳುವ ಮೊದಲು, ಗಗ್ಗರ ಕಟ್ಟುವ ಮೊದಲು ಭೂತದ ಪಾರಿಯನ್ನು ಗುಲ್ಲಿ ಹೇಳುತ್ತಿದ್ದಳು. ಈ ಪಾಡ್ದನದಲ್ಲಿ ಭೂತದ ವರ್ಣನೆ, ಪರಾಕ್ರಮ, ಇತಿಹಾಸ ಇರುತ್ತದೆ. ಇಲ್ಲಿ ಚೋಮ ಮತ್ತು ಗುಲ್ಲಿಯ ಕ್ರಿಯೆಗಳು ಭೂತಾರಾಧನೆಯ ಸಂದರ್ಭದಲ್ಲಿ ಆ ವರ್ಗದ ಕುಟುಂಬದ ಅಥವಾ ಸಮೂಹದ ಸದಸ್ಯರು ತಮ್ಮ ವೃತ್ತಿಯನ್ನು ಮಾಡಿ ವೃತ್ತಿ ಧರ್ಮವನ್ನು ಎತ್ತಿ ಹಿಡಿದ್ದಾರೆ ಎನ್ನುವ ವಿಚಾರ ನಿರೂಪಣೆಗೊಂಡಿದೆ.

ತುಳುನಾಡಿನ ಧಾರ್ಮಿಕ, ಸಾಮಾಜಿಕ, ಸಂಪ್ರದಾಯಗಳನ್ನು ಪರಿಚಯಿಸುವ ಇವರ ತಿಲ್ಲಾನ' ಕೃತಿ ಭೂತಾರಾದನೆಯ ಕುರಿತ ವಿವರಗಳೊಂದಿಗೆ ಅಲ್ಲಿನ ಹೋರಾಟ, ಅಸಹಾಯಕತೆ, ತ್ಯಾಗ, ಶೃಂಗಾರ ಗುಣಗಳನ್ನು ಒಳಗೊಂಡು ತುಳುವರ ಶ್ರೀಮಂತ ಸಂಸ್ಕೃತಿಯನ್ನು ವಿವರಿಸುತ್ತದೆ. ಶ್ರೀ ನೀರ್‌ಮಾರ್ಗರವರೇ ಹೇಳುವಂತೆ ಜಾನಪದ ಕ್ಷೇತ್ರ ಭೂಮಿಯಾದ ತುಳುನಾಡಿನಲ್ಲಿ ಪ್ರಚಲಿತದಲ್ಲಿರುವ ಭೂತಾರಾಧನೆ ಇಡೀ ಜನಪದ ಜಗತ್ತಿಗೆ ಅವಿಸ್ಮರಣೀಯ ಕೊಡುಗೆ. ಭೂತಾರಾಧನೆ ಒಂದು ರೀತಿಯಲ್ಲಿ ಬಹಳ ಸಂಕೀರ್ಣ ರೂಪದ ಆಚರಣೆಯಾಗಿದ್ದು, ಆರಾಧನಾ ಪದ್ಧತಿಯಾಗಿ, ರಂಗಭೂಮಿ ಸಂಪ್ರದಾಯವಾಗಿ ರಾಜಕೀಯ ಆಡಳಿತ ವ್ಯವಸ್ಥೆಯ ಭಾಗವಾಗಿ, ವೈದ್ಯಕೀಯ ಚಿಕಿತ್ಸೆಯ ವಿಧಾನವಾಗಿ ಸಾಂಸ್ಕೃತಿಕ ಅಭಿವ್ಯಕ್ತಿಯಾಗಿ, ಸಾಮಾಜಿಕ ಪದ್ಧತಿಯಾಗಿ ತುಳುವರ ಬದುಕಿನಲ್ಲಿ ಬಹಳ ಪ್ರಭಾವ ಬೀರಿದೆ. ಈ ವ್ಯವಸ್ಥೆಯು ತುಳುನಾಡಿನ ಇತಿಹಾಸದೊಂದಿಗೆ ಚಾರಿತ್ರಿಕ ಸಂಬಂಧವನ್ನು ಹೊಂದಿದ್ದು ತುಳುನಾಡಿನ ಇತಿಹಾಸಕ್ಕೂ ಮಹತ್ವದ ಕೊಡುಗೆ ನೀಡಿದೆ (ಪ್ರಭಾಕರ ನೀರುಮಾರ್ಗ: ನನ್ನ ಕಾದಂಬರಿಗಳಲ್ಲಿ ಚಿತ್ರಿತವಾದ ಪ್ರಾದೇಶಿಕತೆ ಮತ್ತು ಸಂಸ್ಕೃತಿ; (ಅಪ್ರಕಟಿತ,) ೬೬) ಇಡೀ ತುಳುನಾಡಿನ ಭಕ್ತ ಜನರ ದೈವಿಕ ಶಕ್ತಿಯಾದ ಭೂತ ದುಷ್ಟ ಶಿಕ್ಷಕ ಮತ್ತು ಶಿಷ್ಟ ರಕ್ಷಕನೂ ಹೌದು. ತುಳುನಾಡಿನ ಪರಿಶಿಷ್ಟ ಜಾತಿಗೆ ಸೇರಿದ ನಲಿಕೆಯವರನ್ನು ಕೇಂದ್ರವಾಗಿಟ್ಟುಕೊಂಡು ತಿಲ್ಲಾನ' ಕಾದಂಬರಿ ರಚಿತವಾಗಿದೆ. ನಲಿಕೆಯವರ ಕುಲವೃತ್ತಿಯಾದ ಭೂತ ಕಟ್ಟುವ ಕಲೆಯನ್ನು ಎಷ್ಟು ಸಮರ್ಪಕವಾಗಿ, ಪ್ರಾಮಾಣಿಕವಾಗಿ ನಡೆಸಿಕೊಂಡು ಬರುತ್ತಿದ್ದರು. ಈ ವೃತ್ತಿಯಿಂದ ಅವರ ಆರ್ಥಿಕ ಸುಧಾರಣೆ ಸಾಧ್ಯವಾಗದಿದ್ದರೂ, ಅದು ತಮ್ಮ ಧರ್ಮ ಎಂದುಕೊಂಡು, ಒಡಲಿನಲ್ಲಿ ಎಷ್ಟೇ ನೋವಿದ್ದರೂ ತೋರಿಸಿಕೊಳ್ಳದೆ, ಬಣ್ಣ ಹಾಕಿ ನಿಷ್ಠೆಯಿಂದ, ಸಚ್ಚಾರಿತ್ರರಾಗಿ, ಮಡಿವಂತರಾಗಿ ಈ ಆರಾಧನಾ ಸಂಪ್ರದಾಯವನ್ನು ಉಳಿಸಿಕೊಂಡು, ಗೌರವಿಸಿಕೊಂಡು ಬಂದಿದ್ದಾರೆ.

ಪಂಜುರ್ಲಿ ಭೂತದ ಕೋಲದ ಸನ್ನಿವೇಶದೊಂದಿಗೆ ತಿಲ್ಲಾನ' ಕಾದಂಬರಿ ಆರಂಭವಾಗುತ್ತದೆ. ಭೂತದ ಕೋಲವು ಊರಿನ ಸಾಂಸ್ಕೃತಿಕ ಹಾಗೂ ಮನೋರಂಜನೆಯ ಅಂಗವಾಗಿ ಊರಿನ ಜನರ ಮೇಲೆ ಯಾವ ಪ್ರಭಾವ ಬೀರಿದೆ ಎಂಬುದು ಜನರೆಲ್ಲಾ ಉತ್ಸಾಹ, ಲವಲವಿಕೆಯಿಂದ ಹೊಸ ಬಟ್ಟೆಗಳನ್ನು ಧರಿಸಿ ಹೋಗುವ ಆ ಸಂದರ್ಭದವೇ ತಿಳಿಸುತ್ತದೆ. ತುಳುನಾಡಿನ ಸೊಬಗಿನ ವರ್ಣನೆಯೊಂದಿಗೆ ಮುಂದುವರಿಯುವ ಕಾದಂಬರಿ ಕಥಾ ಹಂದರವು ಬೇರೆಬೇರೆ ಸಂದರ್ಭಗಳಲ್ಲಿ ತುಳು ಸಂಸ್ಕೃತಿಯನ್ನು ಪರಿಚಯಿಸುತ್ತದೆ. ಭೂತಾರಾಧನೆ ತುಳುನಾಡಿನಲ್ಲಿ ಜನರ ಬದುಕನ್ನೆ ನಿಯಂತ್ರಿಸುವ ವಿಶೇಷ ಶಕ್ತಿಯುಳ್ಳ, ಸಾಮರ್ಥ್ಯವುಳ್ಳ ಒಂದು ದೈವಿಕ ಕ್ರಿಯೆಯಾಗಿದೆ. ದೈವ ಶಕ್ತಿಯಲ್ಲಿ ಅಪಾರ ನಂಬಿಕೆಯುಳ್ಳ ಈ ನಾಡಿನಲ್ಲಿ ಗ್ರಾಮಕ್ಕೊಂದು ಭೂತ ವಿದ್ದರೆ, ಊರಿಗೊಂದು ಭೂತವೂ ಇರುತ್ತದೆ.

ಊರಿನುದ್ದಕ್ಕೂ ಗುಡಿ, ಗೋಪುರ, ದೇವಸ್ಥಾನಗಳಿದ್ದು, ವರ್ಷವಿಡೀ ಜಾತ್ರೆ, ನೇಮ, ಅಂಕಣ ಆಯನಗಳು ನಡೆಯುತ್ತಿರುತ್ತವೆ.

ನೀರ್‌ಮಾರ್ಗಕ್ಕೆ ಹೊಂದಿಕೊಂಡಿರುವ ಬಯಲು ಪ್ರದೇಶವಾದ ನೆಕ್ಕರೆಪದವಿನಲ್ಲಿ ದೈವದ ಕೋಲ ಏರ್ಪಾಡಾಗಿರುತ್ತದೆ. ನೆಕ್ಕರೆ ಪದವಿನ ಕೋಲ ಬಲಿ ಎಂದರೆ ಅದು ಕೇವಲ ಆ ಊರಿಗೆ ಸೀಮಿತವಾಗಿರದೆ, ನೆರೆಯ ಊರಿನಿಂದಲೂ ಈ ಕೋಲವನ್ನು ನೋಡಲು ಜನರು ತಂಡೋಪತಂಡವಾಗಿ ಬರುವ ಸನ್ನಿವೇಶವಿದೆ. ಹೀಗೆ ಬಂದ ಜನ ತಮ್ಮ ಶಕ್ತ್ಯಾನುಸಾರ ಕಾಣಿಕೆ ನೀಡಿ ದೈವದಿಂದ ಗಂಧ ಪ್ರಸಾದವನ್ನು ಪಡೆಯುತ್ತಾರೆ. ಇಲ್ಲಿ ಏರ್ಪಡಾಗಿರುವ ಕೋಲ ಪಂಜುರ್ಲಿ ಭೂತಕ್ಕೆ ಸಂಬಂಧಿಸಿದ್ದು. ಪಂಜುರ್ಲಿ ಭೂತದ ಮಹಿಮೆ ಸಾಮಾನ್ಯವಾದುದಲ್ಲ. ಇತರ ಭೂತಗಳಿಗಿಂತ ಈ ಭೂತದಲ್ಲಿ ಜನರಿಗೆ ಭಯ ಭಕ್ತಿ ಸ್ವಲ್ಪ ಜಾಸ್ತಿ. ಏಕೆಂದರೆ ಈ ಭೂತವನ್ನು ನೆನೆದರೆ ಆ ಕಾರ್ಯ ತಕ್ಷಣ ಈಡೇರಿಸುತ್ತದೆಂಬ ನಂಬಿಕೆ. ಇಲ್ಲಿ ಜನರಲ್ಲಿ ಯಾವ ರೀತಿ ನಂಬಿಕೆ ಇರುತ್ತದೆ ಎಂಬುದಕ್ಕೆ ಇಲ್ಲಿಯ ವಿವರಗಳನ್ನೇ ಗಮನಿಸಬಹುದು.

ಪುಲಿ ಹಿಡಿದರು ಕೂಡ ಭೂತದ ಮಹಿಮೆಯಿಂದ ಮರಳಿ ಕೊಟ್ಟಿಗೆಗೆ ಬರುವುದುಂಟು. ಮದುವೆಯಾಗದೆ ಮೂಲೆ ಸೇರಿದ ಹುಡುಗಿಯರಿಗೆ ಗಂಡು ಗೊತ್ತಾಗುತ್ತದೆ. ಮಳೆ ಬೆಳೆ ಚೆನ್ನಾಗಿ ಆಗುತ್ತದೆ' (ತಿಲ್ಲಾನ; ೨೦೦೦,೨) ಒಟ್ಟಿನಲ್ಲಿ ದೈವ ಶರಣಾಗತರ ರಕ್ಷಕ ಎಂಬ ನಿಲುವು ಜನರಲ್ಲಿರುವುದು ಸ್ಪಷ್ಟವಾಗುತ್ತದೆ. ಒಂದು ಊರಿನ ಭೂತದ ಕೋಲದ ಸಂದರ್ಭದಲ್ಲಿ ಊರಿಗೆ ಊರೇ ಸೇರುತ್ತದೆ, ಸಂಭ್ರಮಿಸುತ್ತದೆ ಎಂಬುದಕ್ಕೆ ಅಲ್ಲಿ ಸೇರುವ ಜನರೇ ಸಾಕ್ಷಿ. ಪರ ಊರಿನಲ್ಲಿರುವವರು ಒಂದು ವಾರದ ಮೊದಲೇ ಬಂದು ಸೇರುವುದು. ಸಂಭ್ರಮದಲ್ಲಿ ಭಾಗಿಯಾಗುವುದು, ನೆಂಟರಿಷ್ಟರು ವರ್ಷಕ್ಕೊಮ್ಮೆ ಒಂದಾಗುವುದು. ಊಟ ಉಪಚಾರಗಳಿಂದ ಸತ್ಕರಿಸುವುದು – ಹೀಗೆ ಈ ಎಲ್ಲಾ ವಿಚಾರಗಳು ತುಳುನಾಡಿನಲ್ಲಿರುವ ಜನರ ಪ್ರಧಾನ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಇಂತಹ ಸಂದರ್ಭದಲ್ಲಿ ಜನರಲ್ಲು ಒಗ್ಗೂಡಿ ಸುಖದುಃಖಗಳನ್ನು ಹಂಚಿಕೊಳ್ಳುವ ಕ್ರಿಯೆಯು ನಡೆಯುತ್ತದೆ. ಆದ್ದರಿಂದ ಭೂತಕೋಲವು, ಭಾಷಿಕ, ಸಾಂಸ್ಕೃತಿಕ, ಸಾಮಾಜಿಕ ನೆಲೆಯಲ್ಲಿ ಈಗಾಗಲೇ ವಿವೇಚಿಸಿದಂತೆ ಭೂತಾರಾಧನೆಯ ಸಂದರ್ಭದಲ್ಲಿ ಸಮಾಜದ ಬೇರೆ ಬೇರೆ ವರ್ಗದ ಜನರು ತಮ್ಮ ತಮ್ಮ ಪಾತ್ರವನ್ನು ತಮ್ಮ ತಮ್ಮ ಅಂತಸ್ತಿನ, ಅಧಿಕಾರದ ನೆಲೆಯಲ್ಲಿ ಮಾಡುತ್ತಿರುವುದನ್ನು ಕಾಣಬಹುದು. ಬಿಳಿಲುಂಗಿ ಉಟ್ಟು, ತಲೆಗೆ ಬಿಳಿ ರುಮಾಲನ್ನು ಸುತ್ತಿಕೊಳ್ಳುವ ಭೂತದ ಪಾತ್ರಿ, ಬಿಳಿ ಲುಂಗಿ, ಬಿಳಿ ಅಂಗಿ ಧರಿಸಿ ಹೆಗಲಿನಲ್ಲಿ ಕೆಂಪು ಬಣ್ಣದ ಶಾಲು ಹೊದೆದು ಕೋಲದ ಉಸ್ತುವಾರಿಯನ್ನು ನೋಡಿಕೊಳ್ಳುವ ಗುತ್ತಿನವರು, ಹಳದಿ ಬಣ್ಣದ ಧೋತರವನ್ನುಟ್ಟ ಜೋಯಿಸರು.... ಹೀಗೆ ಇವರು ತಮ್ಮದೇ ಆದ ಉಡುಗೆ ತೊಡುಗೆಗಳಿಂದ ಕೋಲಕ್ಕೆ

ಮೆರುಗನ್ನು ನೀಡುತ್ತಾರೆ. ಆರಾಧನೆಯ ಸಂದರ್ಭದಲ್ಲೂ, ಒಂದು ಸಂಸ್ಕೃತಿಯನ್ನು ಗುರುತಿಸಿವಾಗ ಇವೆಲ್ಲಾ ಮಹತ್ತರವಾದ ಅಂಶಗಳೇ ಆಗುತ್ತವೆ. ನಲಿಕೆಯವರು ವೇಷಭೂಷಣಗಳನ್ನು ಧರಿಸಿ ಭೂತದ ಪಾತ್ರವನ್ನು ಸ್ವಯಂನಿರ್ವಹಿಸಿ, ಅದರ ಪರಾಕ್ರಮವನ್ನು ಕುಣಿತದ ಹಾವಭಾವದೊಂದಿಗೆ ಜನರಿಗೆ ತಿಳಿಸುತ್ತಾರೆ. ಭೂತ ಕಟ್ಟುವಾಗ ಎಣ್ಣೆ ಬೂಳ್ಯ ತೆಗೆದುಕೊಳ್ಳುವಲ್ಲಿಂದ ಭೂತ ಬಿರಿಯುವವರೆಗೂ ಅದು ಹೇಳುವ ಪಾಡ್ದನಗಳಲ್ಲಿ ಭೂತದ ಹುಟ್ಟು, ಬೆಳವಣಿಗೆ, ಪರಾಕ್ರಮ ಮತ್ತು ಕಾರಣಿಕಗಳು ಇರುತ್ತವೆ. ಭೂತಕ್ಕೆ ಆವೇಶ ಬಂದಾಗ ಕೋಪ, ಅಟ್ಟಹಾಸ, ಕ್ರೋಧಗಳನ್ನು ಕಾಣಬಹುದು. ಅತ್ಯಂತ ಭಯಭಕ್ತಿಯಿಂದ ಉತ್ತಮ ನಡತೆಯಿಂದ ಶುದ್ಧ ಜೀವನ ನಡೆಸುವ ನಲಿಕೆ ಜನಾಂಗ ಭೂತದ ಪಾತ್ರವನ್ನು ನಿರ್ವಹಿಸುವುದರಲ್ಲಿ ನಿಸ್ಸೀಮರು. ಬಿಡುವಿಲ್ಲದೆ ಸುಶ್ರಾವ್ಯ ಕಂಠದಿಂದ ಪಾಡ್ದನವನ್ನು ಹೇಳಿ ಭೂತದ ಕಾರಣಿಕವನ್ನು, ಮಹಿಮೆಯನ್ನು ಹಾಡುತ್ತಾರೆ.

ತಿಲ್ಲಾಸ್' ಕಾದಂಬರಿಯಲ್ಲಿ ಬರುವ ಎರಡು ಪ್ರಧಾನ ಪಾತ್ರಗಳಾದ ಬೊಮ್ಮು ಮತ್ತು ಹಿರಿಯ ಭೂತಕಟ್ಟುವ ಕಲೆಗಾರಿಕೆಯನ್ನು ಕರಗತ ಮಾಡಿಕೊಂಡವರು. ವಯಸ್ಸಾದವರೂ, ಭೂತಕ್ಕೆ ಆವೇಶ ಬಂದಾಗ ಯುವಕರಿಗೆ ಕಡಿಮೆ ಇಲ್ಲದಂತೆಯೇ ಕುಣಿಯುವ ಬೊಮ್ಮು, ಭೂತ ಕಟ್ಟುವುದರಲ್ಲಿ ಹೊಸಬನಾದ ಹಿರಿಯ ವಿವಿಧ ತಾಳಗಳಿಗೆ ವಿವಿಧ ರೂಪದಲ್ಲಿ ಭಾವಭಂಗಿಗಳಿಂದ, ಮಂಡಲ, ಅರ್ಧಮಂಡಲ, ಸಂಚಾರ, ತಿತ್ತಿರಿ ತಿರುಗುವಿಕೆ , ಮೇಲಕ್ಕೆ ಚಿಮ್ಮಿ ರಿಂಗಣ ಹಾಕಿ ಕುಣಿಯುವ ದೃಶ್ಯ ಅಪೂರ್ವವಾದುದು. ಇದು ಕೋಲದ ಕುಣಿತದ ವೈಖರಿಯನ್ನು ಹೇಳುತ್ತದೆ. ಭೂತದ ನರ್ತನಕ್ಕೆ ಸೇರೆಗಾರರು, ತಾಸೆಯವರು , ವಾದ್ಯದವರು ಧ್ವನಿಯಾಗುತ್ತಾರೆ. ಇಲ್ಲಿ ಬೊಮ್ಮು ನಲಿಕೆಯವನಿಗೆ ವಯಸ್ಸಾದ ಕಾರಣ ಭೂತದ ಕಾಯಕವನ್ನು ನಿರ್ವಹಿಸಲು ಅಸಮರ್ಥನಾದಾಗ ಈ ಕೆಲಸ ಕಾರ್ಯಗಳಲ್ಲಿ ಪಾರಂಗತನಾದ ಹಿರಿಯನನ್ನು ತನ್ನ ಉತ್ತರಾಧಿಕಾರಿಯನ್ನಾಗಿ ನೇಮಿಸುತ್ತಾನೆ. ಪಾಡ್ದನ ಹೇಳುವುದರಿಂದ ಹಿಡಿದು, ತೆಂಬರೆ ಬಾರಿಸುವುದು, ಭೂತದ ವೇಷ ಹಾಕಿ ಕುಣಿಯುವುದು, ನುಡಿ ಹೇಳುವುದು ಎಲ್ಲವನ್ನೂ ಬಲ್ಲವನಾದ ಕಾರಣ ಹಿರಿಯನೇ ಸಮರ್ಥ ವ್ಯಕ್ತಿಯೆಂದು ಆತನಿಗೆ ಹೊಣೆಗಾರಿಕೆಯನ್ನು ಒಪ್ಪಿಸುತ್ತಾನೆ. ನಂತರ ಕಟ್ಟುಕಟ್ಟಳೆಯಂತೆ ಎಣ್ಣೆ ಬೂಳ್ಯ ಕೊಟ್ಟು ಕಟ್ಟುವ ಹಿರಿಯನನ್ನು ಏಳು ಕಡಲ ನೀರಿನಲ್ಲಿ ಶುದ್ಧ ಮಾಡಿಸುತ್ತಾರೆ. ನಂತರ ವಿಧಿವಿಧಾನಗಳಂತೆ ಮುಖಕ್ಕೆ ಅರದಾಳ ಹಚ್ಚಿ, ಗಗ್ಗರ ಕಟ್ಟುವ ಕ್ರಿಯೆ, ಆಮೇಲೆ ತೆಂಗಿನ ಗರಿಯಿಂದ ರಚಿಸಿದ ಅಣಿಯನ್ನು ಕಟ್ಟುವ ಕೆಲಸ ಹೀಗೆ ಒಂದಾದ ನಂತರ ಒಂದರಂತೆ ಬಹಳ ಕ್ರಮ ಪ್ರಕಾರವಾಗಿ ನಡೆಯುತ್ತದೆ. ಈ ಸಂದರ್ಭದಲ್ಲೆಲ್ಲಾ ನಡೆಯುವ ಸಂಪ್ರದಾಯ ರೀತಿ ರಿವಾಜುಗಳನ್ನು ಕಾದಂಬರಿಕಾರರು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಭೂತಾರಾಧನೆಯನ್ನು ಬಹಳಷ್ಟು ಹತ್ತಿರದಿಂದ ನೋಡಿ ಅನುಭವಿಸಿದ, ಆ ಪರಿಸರದಲ್ಲೇ ಹುಟ್ಟಿ ಬೆಳೆದ ಅವರ ಯೋಚನೆ ತುಳು ಸಂಸ್ಕೃತಿಯ

ನೈಜ ಚಿತ್ರಣವನ್ನು ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದೆ.

ಓರಿಯ ಅನಕ್ಷರಸ್ಥನಾದರೂ, ಆತ ತನ್ನ ಜೀವನದಲ್ಲಿ ಅಳವಡಿಸಿಕೊಳ್ಳುವ ಮೌಲ್ಯಗಳು ಆ ಮೌಲ್ಯಗಳಿಗೆ ಧಕ್ಕೆಯಾದಾಗ ಆತ ಪಡುವ ಯಾತನೆ ಬಹಳ ಮಾರ್ಮಿಕವಾಗಿ ಚಿತ್ರಿತವಾಗಿದೆ. ಶ್ರೀಮಂತ ಜನರು ಅಥವಾ ಮೇಲ್ವರ್ಗದ ಜನರು ಭೂತಾರಾಧನೆಯ ಸಂದರ್ಭವನ್ನು ತಮ್ಮ ಸ್ವಾರ್ಥಕ್ಕಾಗಿ ಯಾವ ರೀತಿ ಬಳಸಿಕೊಳ್ಳುತ್ತಿದ್ದರು, ಸಾಮಾಜಿಕವಾಗಿ ಕೆಳಸ್ತರದವನಾದ ಓರಿಯ ಸಮಾಜದ ಮೇಲ್ವರ್ಗದವರ ಸ್ವಾರ್ಥಕ್ಕಾಗಿ ಹೇಗೆ ತಾನು ಕಾಪಾಡಿಕೊಂಡು ಬಂದಿದ್ದ ಜೀವನ ಮೌಲ್ಯಗಳನ್ನು ಅನಿವಾರ್ಯವಾಗಿ ಕಳೆದುಕೊಳ್ಳಬೇಕಾಗುತ್ತದೆ ಎಂಬುದನ್ನು ಇಲ್ಲಿ ತಿಳಿಯಬಹುದು. ಊರಿನ ಜಮೀನ್ದಾರನಾದ ನಾಗಣ್ಣನ ಆಸ್ತಿ ಪಾಲಾಗುವ ಸಂದರ್ಭ ಬಂದಾಗ, ಆತನ ರಕ್ಷಣೆಗೋಸ್ಕರ ಆಸ್ತಿ ಹಂಚಿಕೆಯಾಗದಂತೆ ಏನಾದರೂ ಒಂದು ನೆವನ ತೆಗೆದು ಕೋಲದಂದು ಭೂತ ಪಾಲುಪಟ್ಟಿಯಾಗುವುದನ್ನು ತಪ್ಪಿಸಬೇಕೆಂದು, ಇಲ್ಲದಿದ್ದರೆ ನಿನ್ನ (ಓರಿಯುವ) ಸ್ಥಿತಿ ನೆಟ್ಟಗೆ ಇರುವುದಿಲ್ಲವೆಂದೂ ಬೇರೆ ಬೇರೆ ಆಮಿಷಗಳನ್ನು ತೋರಿಸಿ, ಭೂತ ಕಟ್ಟುವ ಓರಿಯನನ್ನು ಒಪ್ಪಿಸುತ್ತಾನೆ. ನಂತರ ಕೋಲದಂದು ಭೂತ ತನ್ನ ಆತ್ಮ ಸಾಕ್ಷಿಗೆ ವಿರುದ್ಧವಾಗಿ ಪಾಲು ಪಟ್ಟಿ ಕೂಡದೆಂದು ಅಭಯ ಕೊಟ್ಟು, ನಾಗಣ್ಣನಿಂದಾಗಿ ಸಮಸ್ತ ಜನರನ್ನು ಮೋಸಗೊಳಿಸುವ ಪ್ರಸಂಗವೂ ಬರುತ್ತದೆ. ಇಂತಹ ಕೃತ್ಯಗಳು ಕ್ರಮೇಣ ಭೂತಾರಾಧನೆಯಲ್ಲಿರುವ ಸತ್ಯನಿಷ್ಠೆಯನ್ನು, ಭಯಭಕ್ತಿಯನ್ನು ಕಳೆದುಕೊಳ್ಳುವುದಕ್ಕೂ ಕಾರಣವಾಗುತ್ತದೆ. ಇಲ್ಲಿ ಓರಿಯರ ಸಹಾಯಕ್ಕಾಗಿ ನಾಗಣ್ಣ ಉಡುಗೊರೆ ಕೊಟ್ಟಾಗ ಆತ ಅದನ್ನು ಸ್ವೀಕರಿಸದೆ ಕಣ್ಣೀರು ಹಾಕುವ ಮೂಲಕ ಅನಿವಾರ್ಯವಾಗಿ ತಾನು ಅಪಚಾರವನ್ನು ಮಾಡಬೇಕಾಯಿತಲ್ಲ, ಭೂತದ ಪಾವಿತ್ರ್ಯಕ್ಕೆ ಧಕ್ಕೆ ತರಬೇಕಾಯಿತಲ್ಲ ಎಂದು ಕೊರಗುವ ಆತನ ಪಾಡು ಆತನ ಪ್ರಾಮಾಣಿಕತೆಗೆ ನಿದರ್ಶನವಾಗಿದೆ. ಈ ರೀತಿ ನಿಷ್ಠೆ ಪ್ರಾಮಾಣಿಕತೆಯಿಂದ ತನ್ನ ಕಾಯಕಕ್ಕೆ ಕುಂದುಬರದಂತೆ ನಡೆದುಕೊಳ್ಳುತ್ತಿದ್ದ ಓರಿಯನಿಗೆ ಮುಂದೆ ತನ್ನ ಮಕ್ಕಳು ಈ ಕಾಯಕದಲ್ಲಿ ಮುಂದುವರಿಯಬೇಕೆಂದು ಆಸೆಯಿರುತ್ತದೆ. ಆದರೆ ಆಧುನಿಕತೆಗೆ ತೆರೆದುಕೊಂಡ ಆತನ ಮಕ್ಕಳು ಈ ಕಾಯಕವನ್ನು ಇಚ್ಛಿಸುವುದಿಲ್ಲ. ಮುಂದೆ ಅಂಗರ ಎಂಬ ಯುವಕನ್ನು ಈ ಕಾರ್ಯಕ್ಕೆ ನಿಯೋಜಿಸುತ್ತಾನೆ. ಕ್ರಮೇಣ ತನ್ನ ಮಗಳು ಶ್ಯಾಮಿಲಿ ಮತ್ತು ಸಂಶೋಧನೆಗೆಂದು ಬಂದ ಕೃಷ್ಣ ಇವರ ಮಧ್ಯೆ ಪ್ರೇಮಾಂಕುರವಾಗಿ ಓರಿಯ ನಂಬಿದ ಸೂತ್ರದಂತೆ ಅವರೀರ್ವರಿಗೂ ಯಾವುದೇ ಅಡ್ಡಿ ಆತಂಕವಿಲ್ಲದೆ ವಿವಾಹವಾಗುತ್ತದೆ. ನಂತರ ಕಾದಂಬರಿಯ ಕೊನೆ ಹೀಗಿದೆ ಓರಿಯ ಅಪೂರ್ವ ಅನುಭವಗಳನ್ನು ಜಿಲ್ಲೆಯ ವಿಶಿಷ್ಟ ಸಂಸ್ಕೃತಿಯಾದ ಭೂತಾರಾಧನೆಯ ಬಗೆಗಿನ ರೀತಿ ನೀತಿಗಳನ್ನು ಭಾರತದ ಉದ್ದಗಲಕ್ಕೂ ಪರಿಚಯಿಸಲು ಕೃಷ್ಣ ನೆರವಾದ. ಜನಮಾಧ್ಯಮದ ಟಿವಿ, ರೇಡಿಯೋಗಳಲ್ಲಿ ಈ ಸಂಸ್ಕೃತಿಯ ಪರಿಚಯವಾಯಿತು. ಓರಿಯನ ಹೆಸರು ನಾಡಿನಲ್ಲೆಲ್ಲಾ ಮನೆ ಮಾತಾಯಿತು. (ತಿಲ್ಲಾನ;

೨೦೦೦, ೨) ಹಿರಿಯನಂತಹ ಹಲವಾರು ನಲಿಕೆ ಜನಾಂಗದವರು ತುಳುನಾಡಿನಲ್ಲಿ ಭೂತಾರಾಧನೆ ಎಷ್ಟು ನಿಷ್ಠೆ, ಪ್ರಾಮಾಣಿಕತೆಯಿಂದ ಮಾಡುತ್ತಿದ್ದರು, ಸಮಾಜ ಅವರಿಗೆ ಯಾವ ರೀತಿ ಗೌರವ ಕೊಡುತ್ತಿತ್ತು, ಆಧುನಿಕ ಯುಗದಲ್ಲಿ ಪ್ರಾಚೀನ ಕಲೆ ತನ್ನ ಅಸ್ತಿತ್ವವನ್ನು ಹೇಗೆ ಉಳಿಸಿಕೊಂಡು ಬಂದಿದೆ ಎನ್ನುವುದನ್ನು ಇಲ್ಲಿ ಕಂಡುಕೊಳ್ಳಬಹುದು.

ನೀರ್‌ಮಾರ್ಗರವರ ತಿಲ್ಲಾನ, ಮಾದಿರ, ಮದಿಪು ಎನ್ನು ಕಾದಂಬರಿಗಳನ್ನು ಓದುವಾಗ ಬೇರೆ ಬೇರೆ ಸಂದರ್ಭದಲ್ಲಿ ಭೂತಾರಾಧನೆಯ ಬಗ್ಗೆ, ಭೂತಗಳ ಬಗ್ಗೆ ಜನರಿಗಿದ್ದ ವಿಶ್ವಾಸ ಪ್ರಕಟವಾಗುತ್ತದೆ. ಅಗೇಲು, ಕೋಲ ಕೊಡುವ ಮೂಲಕ ಭೂತಗಳನ್ನು ಪ್ರಸನ್ನೀಕರಿಸುವ ವಿಧಾನ, ಶ್ರೇಣೀಕೃತ ಹಾಗೂ ಜಾತಿ ವ್ಯವಸ್ಥೆ, ಗುತ್ತಿನವರಗತ್ತು. ಭೂತಾರಾಧನೆ, ಸಾಮಾಜಿಕನ್ಯಾಯಪದ್ಧತಿ ಇವು ಮೂಡಿಬಂದ ಸಂದರ್ಭಗಳು ವಾಸ್ತವ ನೆಲೆಯಲ್ಲಿ ಚಿತ್ರಣಗೊಂಡಿವೆ. ಜನರು ತಮಗೆ ಸಮಸ್ಯೆಗಳು ಎದುರಾದಾಗ ಜೋಯಿಸರ ಬಳಿ ಹೋಗುವುದು, ಭೂತದ ಕೋಲದ ಸಂದರ್ಭದಲ್ಲಿ ಭೂತದ ಬಳಿ ಪ್ರಶ್ನೆ ಕೇಳುವುದು, ಭೂತದ ವೇಷಧಾರಿಯಿಂದ ಉತ್ತರ ಪಡೆಯುವುದು, ಮುಂತಾದವು ತುಳುನಾಡಿನ ಜನರು ತಮ್ಮ ಸಮಸ್ಯೆಗೆ ಪರಿಹಾರವನ್ನೂ, ನಿವಾರಣಾ ಕ್ರಮವನ್ನು ಕಂಡುಕೊಂಡ ವಿಧಾನವನ್ನು ತಿಳಿಸಿಕೊಡುತ್ತದೆ.

ಮಾದಿರ' ಕಾದಂಬರಿಯಲ್ಲಿಬರುವ ಚೋಮ ವೇಷಗಾರಿಕೆಯಲ್ಲಿ ನಿಷ್ಣಾತನಾಗಿದ್ದನು. ಈತನ ವೇಷಗಾರಿಕೆಯು ಎಂಥವರನ್ನೂ ಮೋಡಿಗೊಳಿಸುವಂತಹದು. ಎಲ್ಲರನೂ ಭಯಗೊಳಿಸುವ ಭೂತದ ಆವೇಶ ಅವನಲ್ಲಿತ್ತು. ಕುಣಿತವನ್ನೇ ತನ್ನ ಜೀವಾಳವಾಗಿಸಿಕೊಂಡ ಚೋಮ ಎಂತಹ ಭಂಗಿಯಲ್ಲೂ ಕುಣಿಯಬಲ್ಲವನಾಗಿದ್ದನು. ದೈವೀ ಶಕ್ತಿಯನ್ನು ಆವಾಹಿಸಿಕೊಳ್ಳುವ ಬಗೆಯಂತೂ ಚೋಮನಿಗೆ ಜನ್ಮದಿಂದಲೇ ಅಂಟಿಕೊಂಡು ಬಂದಂತಿತ್ತು. ಇದರೊಂದಿಗೆ ಭೂತಗಳಲ್ಲಿ, ಆವೇಶ, ಆಕ್ರೋಶವನ್ನು ಲೇಖಕರು ವಿಮರ್ಶಾತ್ಮಕವಾಗಿ ಚಿತ್ರಿಸುತ್ತಾರೆ. ಪಂಜುರ್ಲಿ ಮತ್ತು ಕೋರ್ದಬ್ಬು ದೈವಗಳ ಪ್ರಸ್ತಾಪ ಮಾಡುತ್ತಾ ಮಾಯಕದ ದೈವಗಳಾಗಿ ಇವುಗಳು ಜನಮಾನಸದಲ್ಲಿ ನೆಲೆಯೂರಿದ ಅಂಶಗಳು ವ್ಯಕ್ತವಾಗುತ್ತದೆ. ದೈವಗಳನ್ನು ಅಲೌಕಿ ಶಕ್ತಿಗಳೆಂದು ಆರಾಧನೆಮಾಡಿಕೊಂಡು ಬಂದಿರುವುದನ್ನು ಅನಾದಿಕಾಲದಿಂದಲೂ ಕೇಳಿದ್ದೇವೆ. ದೈವಗಳಿಗೆ ಜನರು ನಡೆದುಕೊಳ್ಳುವ ರೀತಿ ಸರಿಯಾಗದೇ ಇದ್ದಾಗ ಅವು ಮಾವು ರಂಪಾಟ ಜನರನ್ನೇ ತಲ್ಲಣಕ್ಕೆ ಈಡು ಮಾಡುವ ಸಂದರ್ಭ ಇಲ್ಲಿ ವ್ಯಕ್ತವಾಗುತ್ತದೆ. ನಂತರ ಆ ಭೂತದ ಪೂಜಾರಿಗಳು ಕ್ಷಮೆಯನ್ನು ಕೇಳಿದಾಗಲೇ ಭೂತ ಶಾಂತವಾಗುತ್ತದೆ. ಯಾವ ಸಂದರ್ಭದಲ್ಲೂ ಭೂತಗಳು ಜನರಿಗೆ ಅಭಯವನ್ನು ನೀಡುತ್ತವೆ.

ತುಳುನಾಡಿನಲ್ಲಿ ಆರಾಧನೆಗೊಳ್ಳುವ ಭೂತಗಳಲ್ಲಿ ಪಂಜುರ್ಲಿ ಭೂತವು ಸ್ವಲ್ಪ ಉಗ್ರ ಸ್ವರೂಪದ ಭೂತ. ಇದರ ಕುಣಿತ, ಆವೇಶ, ಆದು ನಡುಗುವ ರೀತಿ ಜನರಲ್ಲಿ

ರೋಮಾಂಚನವನ್ನುಂಟು ಮಾಡುತ್ತದೆ. ಭೂತವು ಮುನಿಸಿಕೊಂಡಾಗ ಜನರು ಅದರಲ್ಲಿ ನಿವೇದನೆ ಮಾಡಿಕೊಳ್ಳುವ ಬಗೆ, ತಮ್ಮ ಸಮಸ್ಯೆಗಳಿಗೆ ಪರಿಹಾರವನ್ನು ಪಡೆಯುವ ಸಂದರ್ಭವನ್ನು ನೀರುಮಾರ್ಗರವರು ತಿಳಿಸುತ್ತಾರೆ. "ಎಲೆ ಭೂತವೇ ಮೂರು ಲೋಕದಲ್ಲಿ ಸಹನೆಗೆ, ಒಳಿತಿಗೆ, ಹಾಗೂ ಕಾರ್ಪಣ್ಯಗಳ ನಿವಾರಣೆ ಮಾಡುವಲ್ಲಿ ನಿನಗೆ ಹೆಸರಿದೆ... .. ಸಂಸಾರವನ್ನು ಉದ್ಧರಿಸು.." (ಮಾದಿರ: ೨೦೦೭, ೨೨) ಎನ್ನುವ ಮಾತುಗಳು ಭೂತಾರಾಧನೆಯ ಸಂದರ್ಭದಲ್ಲಿ ಜನರಿಗೆ ಅಲೌಕಿಕ ಶಕ್ತಿಗಳಾದ ದೈವಗಳ ಬಗ್ಗೆ ಇರುವ ನಂಬಿಕೆ, ಶ್ರದ್ಧಾ ಭಕ್ತಿಗಳು ಮನದಟ್ಟಾಗುತ್ತದೆ. ನಂಬಿಕೆ, ಭಯ, ಶ್ರದ್ದೆಯಿಂದಲೇ ತುಳುವರ ಬದುಕು ರೂಪಿತಗೊಂಡಿರುವುದನ್ನು ಇಲ್ಲಿ ತಿಳಿಯಬಹುದು.

ಹಿಂದಿನಿಂದಲೂ ಪರವ ಅಥವಾ ನಲಿಕೆ ಜನಾಂಗದವರು ಭೂತಾರಾಧನೆಯಲ್ಲಿ ಭೂತದ ವೇಷಧಾರಿಯಾಗಿ ಕಾರ್ಯನಿರ್ವಹಿಸುತ್ತಾ ಬಂದಿರುವುದು ತಿಳಿದುಬರುತ್ತದೆ. ಇಲ್ಲಿ ಗಂಡ ಭೂತ ಕಟ್ಟುವವನಾದರೆ, ಆತನ ಹೆಂಡತಿ ಆ ಕ್ರಿಯೆಯಲ್ಲಿ ಆತನಿಗೆ ಸಹಕರಿಸುತ್ತಾ ಬರುತ್ತಾಳೆ. ಮಾದಿರ' ಕಾದಂಬರಿಯಲ್ಲಿ ಭೂತದ ಕಲೆಗಾರಿಕೆಯನ್ನು ಗಂಡ ಹೆಂಡತಿಯವರಾದ ಚೋಮ ಮತ್ತು ಗುಲ್ಲಿ ಒಟ್ಟಾಗಿ ನಿರ್ವಹಿಸಿಕೊಂಡು ಬರುವುದನ್ನು ಕಾಣುತ್ತೇವೆ. ಅಣಿಯನ್ನು ಹೆಣೆಯುವ, ಅಣಿಕಟ್ಟುವ ಕೆಲಸವನ್ನು ಗುಲ್ಲಿ ಮಾಡುತ್ತಾಳೆ. ದುಡಿಯನ್ನು ಬಾರಿಸಿ ಓ.. .. .. ಡೆನ್ನನ... ಡೆನ್ನನಾ... ಎನ್ನುವ ಪಾಡ್ದನ, ನುಡಿಗಳನ್ನು ನಿರರ್ಗಳವಾಗಿ, ಸುಶ್ರಾವ್ಯವಾಗಿ ಹಾಡುತ್ತಾಳೆ. ಎಲ್ಲಾದರೂ ಆಸುಪಾಸಿನಲ್ಲಿ ಕೋಲ ನಿಗದಿಯಾದರೆ, ಕೋಲಕ್ಕೆ ಬೇಕಾಗುವ ಪರಿಕರಗಳನ್ನು ಜೋಡಿಸುವ ಕೆಲಸ ಗುಲ್ಲಿಯದು. ಚೋಮ ಅಣಿಕಟ್ಟಲು ಬೇಕಾಗುವ ತೆಂಗಿನಮರದ ಗರಿಗಳನ್ನು ಸಂಗ್ರಹಿಸುತ್ತಾನೆ. ಕಾಲಿಗೆ ಗಗ್ಗರ ಕಟ್ಟಲು ಅನುಕೂಲವಾದ ಹಿಂಗಾರದ ಹಾಳೆ ಕತ್ತರಿ ಸಿದ್ಧಪಡಿಸುತ್ತಾನೆ. ಅರದಾಳಕ್ಕೆ ಬೇಕಾಗುವ ಸಾಮಾನುಗಳನ್ನು ಅರೆದು ಇಡುತ್ತಾನೆ. ಕಾದಂಬರಿಯಲ್ಲಿ ಉಲ್ಲೇಖಿತಗೊಂಡಂತೆ – ಸಹಧರ್ಮಿಣಿಯಾಗಿ ಗುಲ್ಲಿ ಚೋಮನನ್ನು ಅನುಸರಿಸುತ್ತಾಳೆ. ಕೋಲ ಕಟ್ಟಲು ಚೋಮ ಸಿದ್ಧನಾದರೆ, ಎಣ್ಣೆ ಬೂಳ್ಯದಿಂದ ಹಿಡಿದು ಗಗ್ಗರ, ಅಣಿಕಟ್ಟುವುದು, ಮುಂದಕ್ಕೆ ನುಡಿ ಹೇಳುವುದು, ಬಾರಣೆಗೆ ಇತ್ಯಾದಿ ಕ್ರಿಯೆ ನಡೆಯುವಾಗಲೂ ಭೂತವನ್ನು ಹುರಿದುಂಬಿಸುವ ಅದರ ಪವಾಡ ಹಿರಿಮೆಗಳನ್ನು ಸಾರುವ ಪಾಡ್ದನಗಳನ್ನು ದುಡಿ ಬಾರಿಸಿ ಸುಶ್ರಾವ್ಯವಾಗಿ ಹಾಡುವ ಕೆಲಸಗುಲ್ಲಿಯದ್ದಾಗಿದೆ. ಎಷ್ಟೋ ಮಂದಿಗೆ ಭೂತದ ಕ್ರಿಯೆಗಳಿಗಿಂತ, ಈ ಪಾಡ್ದನವೇ ಇಷ್ಟವಾಗುತ್ತದೆ. ಈ ಹಾಡುಗಾರಿಕಗೆ ಕಾದುಕುಳಿತುಕೊಳ್ಳುತ್ತಾರೆ. ಹೆಂಗಳೆಯರಂತೂ ಗುಲ್ಲಿ ಹಾಡುವಾಗ ಅದಕ್ಕೆ ಧ್ವನಿ ಜೋಡಿಸುವುದುಂಟು (ಮಾದಿರ: ೨೦೦೭; ೧೩೮) ಇಲ್ಲಿ ಪಾಡ್ದನಗಳನ್ನು ದೈವಕ್ಕೆ ಆವೇಶ ಭರಿಸುವ ಸಲುವಾಗಿ ದೈವ ಸೇವೆಯ ವಿಧಿಯ ಪೂರ್ವರಂಗದಲ್ಲಿ ಸಂಬಂಧಿತ ದೈವಗಳ ಕಾರಣಿಕಗಳನ್ನು ವರ್ಣಿಸುವ ಸಂದರ್ಭದಲ್ಲಿ ತೆಂಬರೆ' ಬಡಿಯುತ್ತಾ ಹಾಡಲಾಗುತ್ತದೆ.

ಕಥನ ರೂಪವಾದ ಈ ಪಾಡ್ದನಗಳು ತುಳುನಾಡಿನ ಸಂಸ್ಕೃತಿಯನ್ನು ಪರಿಚಯಿಸಿಕೊಡುತ್ತದೆ. ಗಂಡು ಹೆಣ್ಣೆಂಬ ಭೇದವಿಲ್ಲದೆ ಈ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ. 

ಭೂತಗಳಿಗೆ ನೇಮದ ರೀತಿಯಲ್ಲಿ ಹರಿಕೆ ನೀಡುವ ಕ್ರಮದಂತೆ 'ಅಗೆಲ್' ರೂಪದಲ್ಲಿಯೂ ಹರಿಕೆ ನೀಡುವ ಕ್ರಮವಿದೆ. ಭೂತಕ್ಕೆ ಆಹಾರವಾಗಿ ಹೊದ್ದೊಳು, ಅನ್ನ, ಕೋಳಿ ಇತ್ಯಾದಿ ಖಾದ್ಯಗಳಿಂದ ತಯಾರಿತ ಆಹಾರವನ್ನು ಹರಿಕೆಯ ರೂಪದಲ್ಲಿ ಬಡಿಸಿ ಸಂತೃಪ್ತಿಗೊಳಿಸುವುದು, ಈ 'ಅಗೆಲ್' ಹರಿಕೆಯ ಮುಖ್ಯ ಉದ್ದೇಶವಾಗಿದೆ. ಆಹಾರವನ್ನು ಬಡಿಸಿದ ನಂತರ ಭೂತದ ಕೀರ್ತಿಯನ್ನು ಪಾಡ್ದನದ ಮೂಲಕ ಹರಿಸಿ, ಹರಿಕೆ ನೀಡಿದವರಿಗೆ ಉತ್ತರೋತ್ತರ ಅಬಿವೃದ್ಧಿ ಮಾಡಬೇಕೆಂದು ಭೂತದೊಡನೆ ಪ್ರಾರ್ಥಿಸುವ ಕ್ರಮವಿದೆ. ಈ ಸಂದರ್ಭದಲ್ಲಿ ಭೂತದ ಗುಡಿಯನ್ನು, ಮಣೆಮಂಚವನ್ನು, ಮಲ್ಲಿಗೆಯ ಹೂವಿನಿಂದ ಸಿಂಗರಿಸಲಾಗುತ್ತದೆ.

ಅಗೆಲಿಗಿಂತ ಸ್ವಲ್ಪ ಉನ್ನತ ಮಟ್ಟದ್ದು ಹರಿಕೆ ಭೂತದರ್ಶನ. ಭೂತಕ್ಕೆ ಅಲೌಕಿಕ ದರ್ಶನ ಬಡಿಸಿ, ತಮ್ಮ ಇಷ್ಟಾರ್ಥ ಸಿದ್ದಿಯಾದ ಬಗ್ಗೆ ಭೂತಕ್ಕೆ ಬೇಕಾದ ಆಭರಣಗಳನ್ನು ಒಪ್ಪಿಸುವುದು ಇದೆ. ಈ ಭೂತ ದರ್ಶನದಲ್ಲಿ ಭೂತದ ಪೂಜಾರಿ ಒಪ್ಪಿಸುವುದು ಇದೆ. ಈ ಭೂತ ದರ್ಶನದಲ್ಲಿ ಭೂತದ ಪೂಜಾರಿ ಕೆಂಪು ಬಟ್ಟೆಯನ್ನು ಧರಿಸಿ ಕೈಯಲ್ಲಿ ಮಣಿಗಂಟೆಯನ್ನು ಹಿಡಿದು ಭೂತದ ಪಾತ್ರಿಯ ದರುಶನಕ್ಕೆ ನಿಲ್ಲುತ್ತಾನೆ. ನಂತರ ಭೂತದ ನೀರುಮಾರ್ಗ ಅವರು ತಿಳಿಸಿದಂತೆ ಈ ಮೇಲಿನ ಹರಿಕೆಗಿಂತ ದೊಡ್ಡ ಹರಿಕೆ ಎಂದರೆ ಕೋಲಬಲಿ. ಇಲ್ಲಿ ಕೋಲ ಕಟ್ಟುವವನು ಭೂತದ ವೇಷಧರಿಸಿ ಭೂತದ ಪರಾಕ್ರಮಗಳನ್ನು ಕುಣಿದು ಪಾಡ್ದನಗಳ ಮೂಲಕ ಆಡಿತೋರಿಸುವುದಿದೆ. ಹೆಚ್ಚಾಗಿ ಸುಗ್ಗಿ ಕೊಯಿಲಿನ ನಂತರ ಕಾಲಾವಧಿ ಕೋಲಕ್ಕೆ ದಿನ ನಿಗದಿ ಮಾಡುವುದು ಸಾಮಾನ್ಯ ಕ್ರಮ. ಊರಿನ ಹತ್ತು ಮಾಗಣೆಯ ಗುರಿಕಾರರು ದಿನ ನಿಗದಿ ಮಾಡುವಲ್ಲಿ ಸಹಕರಿಸುತ್ತಾರೆ. ಕೋಲಕ್ಕೆ ದಿನ ನಿಗದಿಯಾದಂದಿನಿಂದ ಕೋಲ ಮುಗಿಯುವವರೆಗೆ ಅದಕ್ಕೆ ಸಂಬಂಧಿಸಿದ ಪೂಜಾರಿ ಶುದ್ಧದಲ್ಲಿ ಇರಬೇಕಾಗುತ್ತದೆ. ಮಾಂಸ ಆಹಾರ ಸ್ವೀಕರಿಸುವಂತಿಲ್ಲ. ಮಧ್ಯಾಹ್ನ ಒಂದು ಬಾರಿ ಅನ್ನಹಾರ. ಉಳಿದಂತೆ ಬೆಳಿಗ್ಗೆ ಸಾಯಂಕಾಲ ಫಲಾಹಾರ. ಅದು ಹೆಂಗಸು ಮಾಡಿದ ಅಡುಗೆಯಲ್ಲ. ಬರಿ ಗಂಡಸರು ಮಾಡಬೇಕು. ಒಂದು ರೀತಿಯ ಕಠಿಣ ಕಟ್ಟುಪಾಡುಗಳು. ಮನೆಗೆ ಹೋಗುವಂತಿಲ್ಲ. ದೈವಸ್ಥಾನದ ಬದಿಯಲ್ಲಿ ಮರದ ಸೋಗೆಗಳಿಂದ ನಿರ್ಮಿತವಾದ ಒಂದು ಕೊಠಡಿಯಲ್ಲಿ ವಾಸಿಸಬೇಕು. ಅಲ್ಲಿಗೆ ಮೈಲಿಗೆಯವರು ಪ್ರವೇಶಿಸೂವಂತಿಲ್ಲ. ಹೀಗೆ ಬಹಳ ಕಠಿಣವಾದ ಕ್ರಮಗಳನ್ನು ಕೈಗೊಳ್ಳಬೇಕಾಯಿತು. ಒಟ್ಟಿನಲ್ಲಿ ಈ ರೀತಿಯ ಎಲ್ಲಾ ವಿವರಗಳು ತುಳುನಾಡಿನ ಜನರ ದೈವಿಕ ಭಕ್ತಿಯು ಸ್ವರೂಪ ಯಾವ ರೀತಿಯದ್ದು ಎನ್ನುವುದನ್ನು ತಿಳಿಸುತ್ತದೆ.

ಭೂತಾರಾಧನೆಯಲ್ಲಿ ಭೂತದ ಬಣ್ಣಗಾರಿಕೆಯೂ ಮುಖ್ಯವಾಗುತ್ತದೆ. ಆರಾಧನೆಯಲ್ಲಿ ಸೇರಿದ ಹಿರಿಯರ ಸಮ್ಮತಿಯನ್ನು ಪಡೆದು ಭೂತಕ್ಕೆ ಕೈಮುಗಿದು ಅರದಾಲ ಹಾಕಲು

ಪ್ರಾರಂಭಿಸುವುದು ಕ್ರಮ. ಅರದಾಲ ಹಾಕುವುದೆಂದರೆ ಮುಖಕ್ಕೆ ಬಣ್ಣ ಹಾಕುವುದು. ಅದು ಒಂದು ಭೂತದಿಂದ ಇನ್ನೊಂದು ಭೂತಕ್ಕೆ ವ್ಯತ್ಯಾಸ ಇರುತ್ತದೆ. ಹಳದಿ ಬಣ್ಣದ ಜೊತೆಗೆ ಬಿಳಿ, ಕೆಂಪು ಬಣ್ಣಗಳನ್ನು ಬೆರೆಸಿ ಮುಖಕ್ಕೆ ತೀಡಿಕೊಳ್ಳುವುದು. ಸಾಮಾನ್ಯವಾಗಿ ಭೂತ ಕಟ್ಟುವವರೇ ಬಣ್ಣ ಹಾಕಿಕೊಳ್ಳುವ ರೂಡಿಯಿದೆ. ಇವಲ್ಲದೆ ಮನೆಯ ಹೆಂಗಸರೂ ಪುರುಷರೂ ಈ ಕಾರ್ಯದಲ್ಲಿ ಅವರಿಗೆ ಸಹಕಾರಿಯಾಗುತ್ತಾರೆ.

ಭೂತಾರಾಧನೆಯಲ್ಲಿ ಗಗ್ಗರ ಕಟ್ಟುವ ಕೆಲಸ ಬಹಳ ಪ್ರಮುಖವಾದ ಭಾಗ. ಇದನ್ನು ಗಗ್ಗರದೆಚ್ಚಿ ಎಂದು ಕರೆಯುತ್ತಾರೆ. ಗೆಜ್ಜೆಯಂತೆ ಸದ್ದು ಮಾಡುವ ಈ ಗಗ್ಗರವನ್ನು ಕಾಲಿಗೆ ಕಟ್ಟಿಕೊಳ್ಳುವ ಕೆಲಸಕ್ಕೆ ಭೂತದ ಪಾತ್ರಧಾರಿ ಸೇರಿದ ಸಮಸ್ತರ ಅನುಮತಿಯನ್ನು ಬೇಡುತ್ತಾನೆ. ಗಗ್ಗರವನ್ನು ಬಲಿಮುದ್ರೆಯ ಎದುರು ಒಂದು  ಎಲೆಯ ಮುಂದೆ ಇಡುತ್ತಾರೆ. ಅಷ್ಟೊತ್ತಿಗೆ ಊರ ಹಿರಿಯರು, ಜೋಯಿಸರು ಭೂತದ ಕಟಾಕ್ಷವನ್ನು ವಿವರಿಸುತ್ತಾ ಅದನ್ನು ಕಟ್ಟಿಕೊಳ್ಳಲು ಅನುಮತಿ ನೀಡುತ್ತಾರೆ. ಆಗ ಭೂತವು ನೆಲದಲ್ಲಿದ್ದ ಗಗ್ಗರವನ್ನು ಎತ್ತಿ ಕೈಯಲ್ಲಿಟ್ಟು ನೆರೆದಿರುವ ಮಹನೀಯರಲ್ಲಿ ಅದನ್ನು ಪ್ರದರ್ಶಿಸಿ ತಾನು ಕಟ್ಟಿಕೊಳ್ಳಲು ಅನುಮತಿ ಬೇಡುತ್ತದೆ. ಈ ದೃಶ್ಯ ನೋಡಲು ಬಹಳ ಆಕರ್ಷಣೀಯ. ಅಷ್ಟೊತ್ತಿಗೆ ಮೇಳದವರು ಗಟ್ಟಿಮೇಳ ಬಾರಿಸುತ್ತಾರೆ. ನಾದಸ್ವರದ ಗುಂಗಿಗೆ ಭೂತವು ಗಗ್ಗರವನ್ನು ಕೈಯಲ್ಲಿಡಿದು ಹೆಜ್ಜೆ ಹಾಕುತ್ತದೆ. ನಾದಸ್ವರ ತೀವ್ರವಾದಂತೆ ಆವೇಶ ಬರುತ್ತದೆ. ಗಡಗಡ ಅಂತ ನಡಗುತ್ತಾ ಅಟ್ಟಹಾಸ ಮಾಡುತ್ತಾ ಭೂತವು ಕುಣಿಯುತ್ತದೆ. ಆ ಸಂದರ್ಭದ ಕುಣಿತ, ಆವೇಶಕ್ಕೆ ಎಂತವರೂ ಒಂದು ಕ್ಷಣಕ್ಕೆ ದಿಗಿಲುಗೊಳ್ಳುತ್ತಾರೆ. ಆವೇಶದಿಂದ ಗಗ್ಗರವನ್ನು ಹಿಡಿದುಕೊಂಡು ಸುತ್ತಾಡುತ್ತಾ ಒಮ್ಮೆಲೆ ಕಾಲಿಗೆ ಗಗ್ಗರವನ್ನು ಕಟ್ಟಿಕೊಳ್ಳುವ ದೃಶ್ಯ ನಯನಮನೋಹರವಾದುದು. ಕಾಲಿಗೆ ಗಗ್ಗರವನು ಕಟ್ಟಿಕೊಂಡ ಮೇಲಂತೂ ಭೂತವು ಇನ್ನಷ್ಟು ಉಗ್ರ ಸ್ವರೂಪವನ್ನು ತಾಳುತ್ತದೆ. ದೀವಟಿಗೆ ಹಿಡಿದವರಿಂದ ದೀವಟಿಕೆ ಎಳೆದು ಬೆಂಕಿಯಿಂದ ಎದೆಗೆ ಕೈಗೆ ಸುಟ್ಟುಕೊಂಡು ಆವೇಶ ಪ್ರದರ್ಶಿಸುವಾಗ ಒಮ್ಮೆಲೆ ಪ್ರೇಕ್ಷಕರೆಲ್ಲರೂ ರೋಮಾಂಚಿತರಾಗುತ್ತಾರೆ. ಈ ಸಂದರ್ಭದಲ್ಲಿ ಜನರಲ್ಲಿರುವ ಭಯ ಭೂತದ ಕಾರಣಿಕದ ಬಗ್ಗೆ ವಿಶ್ವಾಸವನ್ನು ಉಂಟುಮಾಡುತ್ತದೆ. ನಂತರ ಕುಣಿದು ದಣಿದು ಹೋದ ಭೂತಕ್ಕೆ ಎಳನೀರು ಬಾರಣೆ ಮಾಡಿಸುತ್ತಾರೆ. ಈ ಸಮಯದಲ್ಲಿ ದೈವಗಳು ಒಂದೊಂದಾಗಿ ಸುಮಾರು ಹತ್ತಿಪ್ಪತ್ತು ಎಳನೀರನ್ನು ಗಟಗಟನೇ ಕುಡಿದು ತನ್ನ ಅಟ್ಟಹಾಸವನ್ನು ತೋರ್ಪಡಿಸುತ್ತದೆ. ಆಗ ಭೂತದ ಕೋಪವನ್ನು ಶಮನಮಾಡಲು ಜೋಯಿಸರು ಪರಿಪರಿಯಾಗಿ ಪ್ರಯತ್ನಿಸುತ್ತಾರೆ.

ಇದರ ನಂತರದ ಭಾಗ ತೆಂಗಿನ ಮರದ ಸೋಗೆಗರಿಗಳ ತಿರಿಯಿಂದ ತಯಾರಿಸಿದ ಪ್ರಭಾವಳಿಯಂತೆ ಕಂಗೊಳಿಸುವ ಅಣಿಯನ್ನು ಕಟ್ಟಿಕೊಳ್ಳುವ ದೃಶ್ಯ. ಈ ಕ್ಷಣವಂತೂ ಬಲು ಸೊಗಸು. ಅಣಿಯನ್ನು ಧರಿಸದಾಗ ವೇಷಕ್ಕೆ ರಂಗೇರುತ್ತದೆ. ಸೊಂಟಕ್ಕೆ ಜಕ್ಕಲಣಿಯನ್ನು

ಧರಿಸಿದಾಗಲಂತೂ ನಿಜಸ್ವರೂಪದ ಭೂತನೇ ಧರೆಗಿಳಿದಂತೆ ಭಾಸವಾಗುತ್ತದೆ. ಒಂದು ಕೈಯಲ್ಲಿ ಮಣಿ ಇನ್ನೊಂದು ಕೈಯಲ್ಲಿ ಕಡ್ತಲೆ ಹಿಡಿದುಕೊಂಡು ಬಂದ ಭೂತಕ್ಕೆ ಪಾರಿ ಹೇಳಲು ಸಿದ್ಧತೆ ನಡೆಯುತ್ತದೆ. ಶಾಲು ಹೊದೆದು ಮುಂದೆ ನಿಂತ ಗುರಿಕಾರ, ಊರಿನ ಹಿರಿಯರು, ಜೋಯಿಸರು ಪಾರಿ ಹೇಳಲು ಸಿದ್ದರಾಗುತ್ತಾರೆ. ಹೂ ಅಕ್ಕಿಯನ್ನು ಹಿಡಿದು ನಿಂತ ಹಿರಿಯರು ಭೂತದ ಕಾರ್ನಿಕವನ್ನು ವರ್ಣಿಸುತ್ತಾರೆ. ನಂತರ ತಾವು ಈ ಸೇವೆಯನ್ನು ಮಾಡಿಸಲಾದ ಸಂದರ್ಭವನ್ನು ಹೇಳಿ ಕೊಳ್ಳುತ್ತಾರೆ. ಹೀಗೆ ಜೋಯಿಸರ ಮಾತು ಮುಗಿದ ಮೇಲೆ ಎಲ್ಲರೂ ಹೂ, ಅಕ್ಕಿಯನ್ನು ಭೂತದ ಮೇಲೆ ಎಸೆಯುತ್ತಾರೆ. ಮೇಳದವರ ಗಟ್ಟಿಯಾದ ವಾದ್ಯದೊಂದಿಗೆ ನಾದಸ್ವರ ಮೊಳಗುತ್ತದೆ. ಈ ಸಂದರ್ಭದಲ್ಲಿ ಭೂತಕ್ಕೆ ಯಾವುದಾದರೂ ಅಸಮಾಧಾನವಿದ್ದರೆ, ಅದನ್ನು ಅಟ್ಟಹಾಸದ ಮೂಲಕ ತೋರಿಸುತ್ತದೆ. ಕೈಯಲ್ಲಿದ್ದ ಕಡ್ತಲೆ ಹಿಡಿದು ಎದೆಗೆ ಬಡಿದಾಡುತ್ತದೆ. ಸೂಟೆಯನ್ನು ಹಿಡಿದುಕೊಂಡು ಎದೆಗೆ ಹಿಡಿಯುತ್ತದೆ. ಈ ರೀತಿ ತನ್ನ ರೋಷವನ್ನು ಭೂತವು ವ್ಯಕ್ತಪಡಿಸಿದಾಗ ಭೂತದ ಕೋಪವು ಶಮನಗೊಳಿಸುವುದಕ್ಕೆ ಜೋಯಿಸರು, ಊರಿನ ಹಿರಿಯರು ಪ್ರಯತ್ನಿಸುತ್ತಾರೆ. ತಮ್ಮಿಂದ ತಪ್ಪೇನಾದರೂ ಆಗಿದ್ದರೆ ಕ್ಷಮಿಸುವಂತೆ ಕೇಳಿಕೊಳ್ಳುತ್ತಾರೆ. ದೈವದ ಆವೇಶ ಕಡಿಮೆಯಾಗದೇ ಇದ್ದಾಗ, ದೈವದಲ್ಲಿ ನಿವೇದನೆಯನ್ನು ಮಾಡಿಕೊಳ್ಳುವ ಬಗೆಯನ್ನು 'ತಿಲ್ಲಾನ' ಕಾದಂಬರಿಯಲ್ಲಿ ನೀರುಮಾರ್ಗವರು ಈ ರೀತಿ ತಿಳಿಸುತ್ತಾರೆ... ನೋಡು ದೈವ, ನೀನು ಕಟ್ಟುನಿಟ್ಟಿನ ದೈವ. ನಾವು ಮನುಷ್ಯರು ತಿಳಿದೋ ತಿಳಿಯದೆಯೋ ಏನಾದರೂ ತಪ್ಪು ಮಾಡಿರಬಹುದು. ಅದನ್ನು ನೀನು ಉಡಿಯಲ್ಲಿ ಹಾಕಿಕೊಳ್ಳಬೇಕು. ನಮ್ಮನ್ನು ಉದ್ಧರಿಸಬೇಕೇ ಹೊರತು ಹೀಗೆ ಹಟಮಾಡಿಕೊಂಡು ಸಮಯ ಕಳೆದರೆ, ನಿನ್ನ ಸೊಬಗನ್ನು ನೋಡಲು ಬಂದ ಭಕ್ತರಿಗೆ ಎಷ್ಟೊಂದು ಬೇಜಾರಾದೀತು ಎಂದು ತಿಳಿದಿದ್ದೀಯೇ ? ದಯವಿಟ್ಟು ಕೋಪ ಕಡಿಮೆ ಮಾಡಿಕೊಂಡು ನಮ್ಮಿಂದ ಏನು ತಪ್ಪಾಗಿದೆ ಎಂದು ಬಾಯಿಬಿಡು. ನಾವು ಕ್ಷಮೆ ಯಾಚಿಸುತ್ತೇವೆ. ನೀನು ತಿಳಿದವನು. ತಿಳಿದೋ ತಿಳಿಯದೆಯೋ ತಪ್ಪು ಮಾಡಿದ್ದೇವೆ. ಅದನ್ನು ನೀನು ಮನ್ನಿಸಿ ನಮ್ಮನ್ನು ಕಾಪಾಡಬೇಕು? ಎಂದಾಗ, ದೈವವು, 'ಜೋಯಿಸರೇ ನಾನು ಹದಿನಾರು ಅಬತಾರವುಳ್ಳ ದೈವ, ಒಳ್ಳೆಯದಾದರೆ ಎದೆಯಲ್ಲಿ ಜಾಗ ಕೊಡುವವನು, ತಪ್ಪು ಮಾಡಿದರೆ ಎಚ್ಚರಿಸುವವನು' (ತಿಲ್ಲಾನ; ೨೦೦೦, ೧೧) ಎಂಬಿತ್ಯಾದಿ ವಿವರಗಳು ನಂಬಿದ ಭಕ್ತರಿಗೆ ರಕ್ಷನಾಗಿ ದೈವಗಳು ಸಾಕಷ್ಟು ಹಿಂದಿನಿಂದಲೇ ತುಳುನಾಡಿನ ಸಾಂಸ್ಕೃತಿಕ ಬದುಕನ್ನು ನಿರ್ದೇಶಿಸುತ್ತಾ ಬಂದಿರುವುದನ್ನು ಆರಾಧನೆಯ ಸಂದರ್ಭದಲ್ಲಿ ಕಂಡುಕೊಳ್ಳಬಹುದು. ಈ ಕುರಿತ ಲೇಖರ ಒಲವು, ಕುತೂಹಲ ಆಸಕ್ತಿ, ಹತ್ತಿರದಿಂದ ಕಂಡುಕೊಂಡು ಬಂದ ಆರಾಧನಾ ಸಂದರ್ಭದಲ್ಲಿ ವಿವರಗಳ ಕಂಡುಕೊಳ್ಳಬಹುದು. ಈ ಕುರಿತ ಲೇಖಕರ ಒಲವು ಕುತೂಹಲ ಆಸಕ್ತಿ, ಹತ್ತಿರದಿಂದ ಕಂಡುಕೊಂಡು ಬಂದ ಆರಾಧನಾ ಸಂದರ್ಭದ ವಿವರಗಳು ಕಲಾಪ್ರಕಾರವಾಗಿ ರೂಪುಗೊಂಡ ಬಗೆಯನ್ನು ಅವರ ಕಾದಂಬರಿಗಳಲ್ಲಿ ಗುರುತಿಸಲು ಸಾಧ್ಯವಾಗುತ್ತದೆ.

ಭೂತಾರಾಧನೆಯನ್ನು ಹಿಂದಿನಿಂದಲೂ ವಿಶೇಷ ಆಸಕ್ತಿ ಮತ್ತು ಶ್ರದ್ಧೆಯಿಂದ ನಿರ್ವಹಿಸಿಕೊಂಡು ಬಂದಿರುವುದನ್ನು ನೀರುಮಾರ್ಗ ಅವರು ಕಾದಂಬರಿಯಲ್ಲಿ ತಿಳಿಸುತ್ತಾರೆ. ಇಲ್ಲಿಯ ಕೆಲಸವನ್ನು ದೇವರ ಕೆಲಸವೆಂಬಂತೆ ಭಕ್ತಿ ಪೂರ್ವಕವಾಗಿ ಆರಾಧಿಸುತ್ತಾ ಬಂದಿರುವುದು ತುಳುನಾಡಿನ ಸಾಂಸ್ಕೃತಿಕ ಹಿರಿಮೆಯನ್ನು ಹೆಚ್ಚಿಸಿದೆ. ಭೂತಾರಾಧನೆ ಬರೀ ಮನೋರಂಜನೆಗಾಗಿ ಇರುವಂತದಲ್ಲ. ಬದಲಾಗಿ ದೈವಿಕ ಶಕ್ತಿಯ ಆರಾಧನೆಯ ಅಧರ್ಮವನ್ನು ದೂರಮಾಡಿ ಸತ್ಯ ನೆಲೆಗೊಂಡು ಜನರು ಪ್ರೀತಿ ಪ್ರೇಮದಿಂದ ಬೀಳುವ ಮರ್ಮ ಇದರಲ್ಲದೆ ಎಂಬುವನ್ನು ಸ್ವತಃ ಲೇಖಕರೇ ಹೇಳುತ್ತಾರೆ. (ತಿಲ್ಲಾನ;೨೦೦೦,೪೪) ತುಳುನಾಡಿನ ಈ ಆರಾಧನಾ ಪದ್ಧತಿಯು ಎಲ್ಲಿ ಮರೆಯಾಗುತ್ತದೋ ಎಂಬುದರ ಬಗ್ಗೆ ಲೇಖಕರ ಕಳವಳ ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತದೆ. ಭೂತ ಕಟ್ಟುವುದರಲ್ಲಿ ಆಕರ್ಷಣೆ ಇಲ್ಲದಿದ್ದರೂ ಊರಿನ ನೆಮ್ಮದಿ ಅದರಲ್ಲಿದೆ, ಭಾರತದ ಸಂಸ್ಕೃತಿಯ ಆಳ ಈ ಆರಾಧನೆಯಲ್ಲಿದೆ. ಆದ್ದರಿಂದ ಇದನ್ನು ಇಲ್ಲಿ ಉಳಿಸಿ ಬೆಳೆಸಿ ಮುಂದಿನ ಪೀಳಿಗೆಗೆ ಕೊಂಡು ಹೋಗುವ ಕೆಲಸ ಮಾಡಿದರೆ ಮಾತ್ರ ಈ ಆರಾಧನೆ ಉಳಿಯುತ್ತದೆ, ಬೆಳೆಯುತ್ತದೆ ಎಂಬ ಅಂಶ ಇಲ್ಲಿ ತಿಳಿದುಬರುತ್ತದೆ.

ಸಾಮಾನ್ಯವಾಗಿ ರಾತ್ರಿ ಕೆಲಸವೆಲ್ಲ ಮುಗಿದ ಬಳಿಕ ತುಳುನಾಡಿನ ಕೆಲವು ಮನೆಗಳಲ್ಲಿ ತುಳುನಾಡಿನ ಕಾರಣಿಕದ ಪುರುಷರ ಪಾಡ್ದನ ಹಾಡುವ ರೂಡಿಯಲ್ಲಿರುವುದನ್ನು ಕಾದಂಬರಿ ಓದಿನ ಮುಖಾಂತರ ತಿಳಿಬಹುದಾಗಿದೆ. ನಾಗರಿಕತೆಯ ಪ್ರಭಾವದಿಂದ ಹಳೆಯ ಸಂಸ್ಕೃತಿಗಳು ನಶಿಸಿ ಹೋಗುತ್ತಿರುವ ಬಗ್ಗೆ ವಿಷಾದವಿದೆ. ಆಧುನಿಕತೆಯೊಡನೆ ನಮ್ಮ ತುಳುನಾಡಿನ ಸಂಸ್ಕೃತಿಯನ್ನು ಉಳಿಸಿಕೊಂಡು ಹೋಗಬೇಕೆಂಬ ಲೇಖಕರ ವಿಚಾರವನ್ನು ಇಲ್ಲಿ ಗಮನಿಸಬಹುದು. ಆಧುನಿಕತೆಯನ್ನು ಒಪ್ಪಿಕೊಳ್ಳುವ, ಇದನ್ನು ಮುಂದುವರಿಸಿಕೊಂಡು ಹೋಗುವ ವಿವೇಚನೆ ಯುವ ಪೀಳಿಗೆಯಲ್ಲಿ ಇರಬೇಕೆಂಬ ನಿಲುವನ್ನು ಲೇಖಕರು ವ್ಯಕ್ತ ಪಡಿಸುತ್ತಾರೆ. ಯಾವುದೇ ಆರಾಧನಾ ಸಂಪ್ರದಾಯವನ್ನು, ಕುಲ ಕಸುಬನ್ನು ಹೀಗಳೆಯದೆ ಈ ನಾಡಿನ ಸಂಸ್ಕೃತಿಯ ದೃಷ್ಟಿಯಿಂದ ಒಪ್ಪಿಕೊಳ್ಳಬೇಕಾದ ಅಗತ್ಯತೆಯನ್ನು ತಿಳಿಸುತ್ತಾರೆ.

### ೪.೨ ನಾಗಾರಾಧನೆ

ನಾಗಾರಾಧನೆ ವಿಶ್ವದ ಅನೇಕ ದೇಶಗಳಲ್ಲಿ ಕಂಡುಬರುತ್ತದೆ. ಇದು ಆಯಾ ಪ್ರದೇಶದ ಸಂಸ್ಕೃತಿಯಲ್ಲಿ ವಿಶೇಷವಾದ ಸಂಬಂಧವನ್ನು ಪಡೆದ ವಿಚಾರವಾಗಿದೆ. ಭಾರತದಾದ್ಯಂತ ನಾಗಾರಾಧನೆಯ ವಿವಿಧ ಪ್ರಕಾರಗಳು ಕಾಣಸಿಗುತ್ತವೆ. ನಮ್ಮಲ್ಲಿ ನಾಗಾರಾಧನೆಗೆ ಇರುವಷ್ಟು ಪ್ರಾಶಸ್ತ್ಯ ಪ್ರಾಯಶಃ ಇನ್ನಾವ ದೇಶದಲ್ಲೂ ಇರಲಾರದು ಎಂದರೆ ತಪ್ಪಾಗಲಾರದು. ಅದರಲ್ಲೂ ತುಳುನಾಡು ತನ್ನದೇ ಆದ ಸಂಪ್ರದಾಯಗಳಲ್ಲಿ ನಾಗಾರಾಧನೆಯನ್ನು ಉಳಿಸಿಕೊಂಡು ಬಂದಿದೆ. ತುಳುನಾಡು ನಾಗಲೋಕವಾಗಿತ್ತೆಂದೂ, ಇಲ್ಲಿಗೆ ನಾಗ್ರಬ್ರಹ್ಮನೆಂಬ ದೈವವೇ ಸೃಷ್ಟಿಕರ್ತ

ಸ್ಥಾನದಲ್ಲಿರುವುದಾಗಿಯೂ ಜನಪದ ಪ್ರತೀತಿ ಇದೆ. ಬ್ರಹ್ಮ, ನಾಗಬ್ರಹ್ಮ, ನಾಗಯಕ್ಷ, ನಾಗಯಕ್ಷಿ, ಬೆರ್ಮೆರ್, ಅನಂತಪದ್ಮನಾಭ, ಸುಬ್ರಹ್ಮಣ್ಯ ಮೊದಲಾದ ಬೇರೆ ಬೇರೆ ಹೆಸರಿನಿಂದ ನಾಗನನು ತುಳುನಾಡಿನಲ್ಲಿ ಆರಾಧನೆ ಮಾಡುತ್ತಾರೆ. ಪ್ರಾಚೀನ ಕಾಲದಿಂದಲೂ ಎಲ್ಲಾ ಜನಾಂಗಗಳಲ್ಲೂ ಆತಂಕಕಾರೀ ಹಾಗೂ ಅಪಾಯಕಾರೀ ನಿಸರ್ಗ ಶಕ್ತಿಗಳನ್ನು ವಿವಿಧ ಆರಾಧನೆಗಳಿಂದ ಒಲಿಸಿಕೊಳ್ಳುವ ಪ್ರಯತ್ನ ಕಂಡುಬಂದಂತೆ ತುಳುವರಲ್ಲೂ ಕಂಡು ಬಂದಿದೆ. ಹೀಗೆ ಭಯ, ಭಕ್ತಿ, ಬಯಕೆ, ಕನಸುಗಳಿಂದ ಮೈವಡೆದು ಮೂಡಿದ ದೇವತೆ ನಾಗ.

ಕರಾವಳಿಯ ಜನರಲ್ಲಿ ನಾಗಗಳ ಬಗೆಗಿನ ವಿವಿಧ ನಂಬಿಕೆಗಳು ಇಲ್ಲಿ ಪರಿಚಯವಾಗುತ್ತದೆ. ನಾಗದೇವತೆಗೆ ಸಂಬಂಧಿಸಿ ತಂಬಿಲ, ನಾಗಮಂಡಲ, ಡಕ್ಕೆಬಲಿ, ಸರ್ಪಸಂಸ್ಕಾರ, ನಾಗದರ್ಶನ ಮೊದಲಾದ ಸೇವೆಗಳು ಸಲ್ಲುತ್ತವೆ. ಇವುಗಳನ್ನು ಒಂದು ಕಲಾಪ್ರಕಾರವಾಗಿ ಲೇಖಕರು ಇಲ್ಲಿ ಪರಿಗಣಿಸಿರುವ ರೀತಿ ವಿಶಿಷ್ಟವಾದುದು. ಇವರ ಕಾದಂಬರಿಗಳಲ್ಲಿ ಕಂಡು ಬರುವ ಪ್ರಮುಖ ಸೇವೆಗಳು:

**ನಾಗತಂಬಿಲ:** ಇದು ಹೂ, ಹಣ್ಣು, ಹಾಲು, ತಾಂಬೂಲ, ಎಳನೀರುಗಳನ್ನು ನಾಗನಿಗೆ ಅರ್ಪಿಸಿ, ನಡೆಸುವ ಸರಳ ಸಾತ್ವಿಕ ಪೂಜೆ. ಇದನ್ನು ಸಾಮಾನ್ಯವಾಗಿ ಬ್ರಾಹ್ಮಣರೇ ನಿರ್ವಹಿಸುತ್ತಾರೆ. ನಾಗರ ಪಂಚಮಿಯಂದು ಈ ಸೇವೆಯನ್ನು ತುಳುವರು ಮಾಡುತ್ತಾ ಬಂದಿದ್ದಾರೆ.

**ನಾಗಸಂಸ್ಕಾರ :** ಆಕಸ್ಮಿಕವಾಗಿಯೋ, ಅನಿವಾರ್ಯವಾಗಿಯೋ ವ್ಯಕ್ತಿಯೊಬ್ಬ ಅಥವಾ ಆತನ ಪೂರ್ವ ಸಂಬಂಧಿಗಳು ನಾಗನನ್ನೋ ನಾಗನ ಮೊಟ್ಟೆಗಳನ್ನೋ ನಾಶಮಾಡಿದರೆ ಅವರಿಗೆ ನಾಗದೋಷ ಉಂಟಾಗುತ್ತದೆ ಎಂಬ ನಂಬಿಕೆ. ಈ ದೋಷ ನಿವಾರಣೆಗೆ ಸರ್ಪಸಂಸ್ಕಾರ, ನಾಗಪ್ರತಿಷ್ಠೆ, ಆಶ್ಲೇಷ ಬಲಿ, ಇತ್ಯಾದಿಗಳನ್ನು ನೆರವೇರಿಸುತ್ತಾರೆ. ಹಾಗೆಯೇ ಸತ್ತ ಸರ್ಪವನ್ನು ಕಂಡರೆ ಬ್ರಾಹ್ಮಣರ ಮೂಲಕ ವಿಧಿವತ್ತಾಗಿ ಸಂಸ್ಕಾರ ಮಾಡಬೇಕು ಮತ್ತು ಉತ್ತರ ಕ್ರಿಯೆಯನ್ನು ಮಾಡಬೇಕೆಂಬ ನಿಯಮವಿದೆ.

**ನಾಗದರ್ಶನ :** ನಿರ್ದಿಷ್ಟ ಸ್ಥಳಗಳಲ್ಲಿ ಬ್ರಾಹ್ಮಣ ಪಾತ್ರಿ ನಾಗದೇವತೆಯನ್ನು ಆವಾಹಿಸಿಕೊಂಡ, ಹಾವಿನಂತೆ ಬುಸುಗುಡುತ್ತಾ ಉರಗ ಚಲನೆಯನ್ನು ಅನುಕರಿಸುತ್ತಾ, ವಿಶಿಷ್ಟವಾಗಿ ನಡುಗುತ್ತಾನೆ. ಕೈಯಲ್ಲಿ ಹಿಂಗಾರವನ್ನು ಹಿಡಿದು ಮುಖಕ್ಕೆ ಬಡಿಯುತ್ತಾ ಆವೇಶ ಪೂರ್ಣವಾಗಿ ಹೊರಳಾಡುತ್ತಾನೆ. ನಾಗಭಕ್ತರು ತಮ್ಮ ಸಮಸ್ಯೆಗಳನ್ನು ಅರಿಕೆ ಮಾಡಿಕೊಂಡು ಆತನಿಂದ ಪರಿಹಾರ ಮಾತನ್ನೂ ಅರಸಿನ ಹುಡಿ ಮತ್ತು ಹಿಂಗಾರದ ಪ್ರಸಾದವನ್ನು ಪಡೆಯುತ್ತಾರೆ.

**ಡಕ್ಕೆ ಬಲಿ :** ಇದನ್ನು ದಕ್ಕೆ ಬಲಿ, ಡಕ್ಕೆ ಬಲಿ ಜಕ್ಕೆ ಬಲಿ ಎಂದೂ ಕರೆಯುವುದಿದೆ. ಇಲ್ಲಿ ಮುಖ್ಯ ಪಾತ್ರವಹಿಸುವವರು ಇಬ್ಬರು. ನಾಗನನ್ನು ಬ್ರಾಹ್ಮಣ ಪಾತ್ರಿ ಪ್ರತಿ ನಿಧೀಕರಿಸಿದರೆ, ವೈದ್ಯ ಜನಾಂಗದ ವ್ಯಕ್ತಿಯೊಬ್ಬ ಅರ್ಧನಾರೀ' ವೇಷತೊಟ್ಟು ಡಕ್ಕೆ ವಾದ್ಯವನ್ನು ಬಾರಿಸುತ್ತಾ,

ಸ್ತುತಿ ಪರವಾದ ಹಾಡುಗಳನ್ನು ಹಾಡುತ್ತಾ ವಿಧವಿಧದ ಹೆಜ್ಜೆಗಳ ಕುಣಿತ, ಬಾಗು ಬಳುಕುಗಳಿಂದ ನಾಗನನ್ನು ಪ್ರಸನ್ನೀಕರಿಸುವ ಪಾತ್ರವನ್ನು ವಹಿಸುತ್ತಾನೆ. ಪಾತ್ರಿಯು ಬುಸುಗುಡುತ್ತಾ ಹಿಂಗಾರವನ್ನು ಮುಖಕ್ಕೆ ತಿಕ್ಕಿ ತಿಕ್ಕಿ ಬಿಸಾಡುತ್ತಾನೆ. ನಾಗಮಂಡಲದಲ್ಲಿ ಹೆಡೆ ಬಿಚ್ಚಿದ ನಾಗನ ರೂಪವನ್ನು ಚಿತ್ರಿಸಿದರೆ, ಡಕ್ಕೆ ಬಲಿಯಲ್ಲಿ ಬ್ರಹ್ಮ ತ್ರಿಶೂಲ, ಯಕ್ಷಿ, ನಾಗ ಇವುಗಳ ಚಿತ್ರವನ್ನು ಪಂಚವರ್ಣದಲ್ಲಿ ಬಿಡಿಸುತ್ತಾರೆ.

**ನಾಗಮಂಡಲ :** ಇದು ಡಕ್ಕೆ ಬಲಿಯ ವಿಸ್ತೃತ ಹಾಗೂ ವೈಭವೀಕತ ರೂಪ ಎನ್ನಬಹುದು. ಈ ಸೇವೆಗೆ ಪಂಚವರ್ಣದ ಹುಡಿಗಳಿಂದ ಕಲಾತ್ಮಕ ಮಂಡಲವನ್ನು ಬರೆದು ಅದರಲ್ಲಿ ಸುರುಳಿ ಹಾಕಿ ಹೆಡೆ ಬಿಚ್ಚಿದ ನಾಗನ ಚಿತ್ರವನ್ನು ವೈದ್ಯರು ಬಿಡಿಸುತ್ತಾರೆ. ಮಂಡಲದ ಸುತ್ತ ಡಮರು ಹಿಡಿದ ಅರ್ಧನಾರೀ ಪಾತ್ರಧಾರಿ ಹಾಗೂ ನಾಗ ಪಾತ್ರಧಾರಿ ಆವೇಶಗೊಂಡು ಲಯಬದ್ಧವಾಗಿ ನರ್ತಿಸುತ್ತಾರೆ. ಸಂತಾನ ಪ್ರಾಪ್ತಿ, ದೃಷ್ಟಿರೋಗ, ಚರ್ಮರೋಗಗಳ ನಿವಾರಣೆ, ನಾಗದೋಷ ನಿವಾರಣೆ ಹಾಗೂ ಇತರ ಇಷ್ಟಾರ್ಥ ಸಿದ್ಧಿಗಾಗಿ ನಾಗಮಂಡಲದ ಹರಕೆ ಹೊರುತ್ತಾರೆ. ಬರುವ ಸಾವಿರ ಗಟ್ಟಲೆ ಜನರಿಗೆ ಅನ್ನಸಂತರ್ಪಣೆ ನಡೆಯಬೇಕಾದುದು ಈ ಹರಕೆಯ ಅನಿವಾರ್ಯ ಅಂಗ. ಇಲ್ಲಿ ನಾಗಕನ್ನಿಕೆ ಮತ್ತು ನಾಗಪಾತ್ರಿಗಳ ನರ್ತನ ಢಕ್ಕೆ ಬಲಿಯ ರೀತಿಯಲ್ಲೇ ಇರುತ್ತದೆ. ನಾಗನೃತ್ಯದ ವಿವಿಧ ಭಂಗಿಗಳನ್ನು ಪ್ರದರ್ಶಿಸಿದ ಬಳಿಕ ನಾಗಪಾತ್ರಿಯ ಅಭಯ ವಾಕ್ಯ, ಭಕ್ತರ ನಿವೇದನೆಗಳಿಗೆ ಸಮಾಧಾನ, ಪರಿಹಾರ ಇತ್ಯಾದಿ ನಡೆಯುತ್ತದೆ. ಇದೊಂದು ಫಲಸಮೃದ್ಧಿಯ, ಸಂತಾನ ಕ್ಷೇಮದ ಆಶಯವುಳ್ಳ ಆಚರಣೆಯಾಗಿದೆ.

ತುಳುನಾಡಿನ ನಾಗಾರಾಧನೆಯ ಸಮಷ್ಟಿ ಕಲೆಯ ಕುರಿತಂತೆ ನೀರ್‌ಮಾರ್ಗರವರ ಕಾದಂಬರಿಗಳು ಬೆಳಕು ಚೆಲ್ಲುತ್ತದೆ. ಪ್ರಧಾನವಾಗಿ ಇವರ 'ತಂಬಿಲ' ಕಾದಂಬರಿಯ ಕುರಿತಂತೆ ಅಧ್ಯಯನ ಮಾಡಿದಾಗ ಅಲ್ಲಿ ಸಿಗುವ ವಿಚಾರಗಳು, ವಿವರಗಳು ದಕ್ಷಿಣ ಕನ್ನಡದ ಜನರು ನಾಗ–ನಾಗಾರಾಧನೆಯನ್ನು ಕುರಿತಾಗಿನ ಅವರ ನಂಬಿಕೆಗಳು, ಆಚರಣೆಯ ಪದ್ಧತಿ, ನೆಮ್ಮದಿಯ ಬದುಕನ್ನು ಕಂಡುಕೊಳ್ಳಲು ಆರಾಧನೆಯನ್ನು ಕೈಕೊಳ್ಳುವ ಕ್ರಮಗಳು ವೇದ್ಯವಾಗುತ್ತದೆ. ತುಳುನಾಡಿನ ವೈವಿಧ್ಯಮಯವಾದ ಉಪಾಸನೆಗಳು ಅನಾದಿಕಾಲದಿಂದಲೂ ನಡೆಯುತ್ತಿದ್ದು, ಪರಮೋಚ್ಚ ದೇವರಿಗಾಗಿ ನಾಗ ಪೂಜೆಗೊಳ್ಳುವುದನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ. ಪ್ರಕೃತಿಯ ಮಡಿಲಲ್ಲಿ ಪ್ರಕೃತಿಯನ್ನು ಪ್ರಧಾನವಾಗಿರಿಸಿ ಪ್ರಕೃತಿ ಜನ್ಯ ಶಕ್ತಿ ವಿಶೇಷವಾದ ನಾಗನನ್ನು ಸಂತಾನ, ಸಂಪತ್ತು, ಸಮೃದ್ಧಿ, ಮಳೆ ಬೆಳೆಗಳನ್ನು ಅನುಗ್ರಹಿಸುವ ಒಂದು ಶಕ್ತಿಯಾಗಿ ಇಲ್ಲಿರುವ ಜನ ನಂಬಿಕೊಂಡು ಬಂದುದರಿಂದ ಇವತ್ತಿಗೂ ನಾಗನಿಗೆ ವಿಶೇಷ ಸೇವೆಗಳು ಸಲ್ಲುವುದನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ. ಇಲ್ಲಿ ನಿರೂಪಿತವಾಗುವ ಪಾತ್ರ – ಸನ್ನಿವೇಶಗಳು– ನಂಬಿಕೆಗಳು ತುಳು ಜನಪದ ಜೀವನಕ್ಕೆ ಸಂಬಂಧಿಸಿದವು. ಅದ್ಭುತವಾದ, ಮೈನವಿರೇಳಿಸುವ ಕತೆಗಳ ಮೂಲಕ ನಾಗಗಳ ಬಗೆಗೆ ಕರಾವಳಿಯ ಜನರಲ್ಲಿರುವ ನಂಬಿಕೆಗಳನ್ನು ಪರಿಚಯಿಸುವ

ಪ್ರಯತ್ನವನ್ನು ಮಾಡಿದ್ದಾರೆ. ಹಿಂದೂ-ಮುಸ್ಲಿಂ-ಕ್ರೈಸ್ತ ಎಂಬ ಬೇಧ ಭಾವಗಳಿಲ್ಲದೆ ನಾಗಾರಾಧನೆಯಲ್ಲಿ ಭಾಗವಹಿಸುತ್ತುರುವುದು ನಮ್ಮ ತುಳು ಸಂಸ್ಕೃತಿಯ ಒಂದು ಶಿಷ್ಟಾಚಾರ ಎಂಬುದನ್ನು ಹೇಳಲು ಲೇಖಕರು ಇಲ್ಲಿ ಮರೆಯುವುದಿಲ್ಲ. ನಾಗ ಸಂಕುಲಕ್ಕೆ ತೊಂದರೆ ಕೊಟ್ಟಾಗ ಅಲ್ಲಿ ಉದ್ಭವಿಸುವ ಸಮಸ್ಯೆಗಳು, ಅದು ಮುಂದಿನ ತಲೆಮಾರಿಗೂ ಪರಿಣಾವನ್ನು ಬೀರುವುದು. ಆದ್ದರಿಂದ ನಾಗನನ್ನು ಬೇರೆ ಬೇರೆ ಸೇವೆಗಳಿಂದ ಪೂಜಿಸಿಕೊಂಡು ಬರಬೇಕಾದ ಅನಿವಾರ್ಯತೆಯನ್ನು ಇಲ್ಲಿ ಎತ್ತಿ ಹಿಡಿದಿದ್ದಾರೆ.

ತಂಬಿಲ ಕಾದಂಬರಿಯ ಪ್ರಾರಂಭದಲ್ಲಿ ಪಟೇಲರ ಮನೆಯಲ್ಲಿ, ಸುತ್ತಮುತ್ತ ಹಾವುಗಳು ಇಪ್ಪಕ್ಕಿಪ್ಪಂತೆ ಕಾಣಿಸಿಕೊಳ್ಳಲು ಆರಂಭಿಸಿದಾಗ ಈ ಸಮಸ್ಯೆಯ ಪರಿಹಾರಕ್ಕಾಗಿ ಜೋಯಿಸರಲ್ಲಿಗೂ, ನಂತರ ತಂತ್ರಿಗಳಲ್ಲಿಗೂ ಹೋಗುತ್ತಾರೆ. ಆ ಸಂದರ್ಭದಲ್ಲಿ ಜೋಯಿಸರಾಗಲಿ, ತಂತ್ರಿಗಳಾಗಲಿ ಪಟೇಲರ ಸಮಸ್ಯೆಯಲ್ಲಿ ಯಾವ ರೀತಿ ಭಾಗಿಗಳಾಗುತ್ತಾರೆ ಎಂಬುವನ್ನು ಗಮನಿಸಬಹುದು. ಕೃಷಿ ಮೂಲದಿಂದ ಬಂದ, ಪರಿಸರ ಪ್ರೇಮಿಯಾದ ಜೋಯಿಸರು, ಪಟೇಲರ ಸಮಸ್ಯೆಗೆ ಸ್ಪಂದಿಸುವುದಕ್ಕೂ ಸ್ವಾರ್ಥ ಗುಣದ, ಪಟೇಲರ ಹಣ, ಸಂಪತ್ತಿನ ಮೇಲೆ ಆಸೆ ಪಟ್ಟಿರುವ ತಂತ್ರಿಗಳು ಸ್ಪಂದಿಸುವುದಕ್ಕೂ ಅಜಗಜಾಂತರವಿದೆ.

ಪಟೇಲರಿಗೆ ನಾಗನ ಹಾವಿನ ದರ್ಶನವಾದಾಗ, ಅದರಿಂದ ಸಂಕಟಕ್ಕೆ ಒಳಗಾದ ಜೋಯಿಸರೊಡನೆ ಸಮಾಲೋಚನೆಗೆ ತೊಡಗುತ್ತಾರೆ. ಅಲ್ಲಿ ಜೋಯಿಸರು ಕೊಡುವ ಸಲಹೆ ಸೂಚನೆಗಳು ಪರಿಸರ ಸಂರಕ್ಷಣೆಯ ಪರವಾದ ವಿಷಯವಾಗಿರುತ್ತದೆ. ಪರಿಸರದಲ್ಲಿ ಏರುಪೇರಾದಾಗ ಆ ಪರಿಸರವೂ ಹೇಗೆ ಪೂರಕವಾಗಬಹುದು ಎಂಬ ಸೂಕ್ಷ್ಮ ವಿಚಾರವೂ ಇಲ್ಲಿ ವ್ಯಕ್ತವಾಗುತ್ತದೆ. ಪಟೇಲಸ ಮನೆಯ ಪಕ್ಕದ ಕಾಡಿನಲ್ಲಿರುವ ಮರಗಳನ್ನು ಲಾಭದ ಉದ್ದೇಶದಿಂದ ಮರದ ವ್ಯಾಪಾರಿಯೊಬ್ಬರಿಗೆ ಕೊಟ್ಟದೇ ಅವರ ಮುಂದಿನ ಸಮಸ್ಯೆಗಳಿಗೆ ಕಾರಣವಾಯಿತು. ಕಾಡು ನಾಶಮಾಡಿ, ಪ್ರಾಣಿ ಸಂಕುಲಗಳಿಗೆ ತೊಂದರೆಯಾದಾಗ, ಅದು ಮಾನವರಿರುವ ಪ್ರದೇಶಕ್ಕೆ ಧಾಳಿಮಾಡುವುದು ಸಹಜ ಎಂಬ ವಿವರಗಳೊಂದಿಗೆ ಪರಿಸರ ಸಂರಕ್ಷಣೆಯ ಮೂಲಕವೇ ಅದಕ್ಕೆ ಪರಿಹಾರವನ್ನು ಕಂಡುಕೊಳ್ಳಬೇಕು ಎಂಬ ಜೋಯಿಸರ ವಿಚಾರ ಇಲ್ಲಿ ಅರ್ಥಪೂರ್ಣವಾಗಿ ಮೂಡಿಬಂದಿದೆ. ಜೋಯಿಸರ ಈ ವಿಚಾರಗಳು ಪಟೇಲರಿಗೆ ಸಮಾಧಾನವನ್ನು ತರಲಿಲ್ಲ. ಅಷ್ಟು ಮಾತ್ರವಲ್ಲದೆ ತನ್ನ ಮೇಲೆಯೇ ಅಪವಾದ ಹೊರಿಸಿದರಲ್ಲಾ ಎನ್ನುವ ಯೋಚನೆಯೊಂದಿಗೆ ಮುಂದೆ ತಂತ್ರಿಗಳನ್ನು ಕಾಣಲು ಹೋಗುತ್ತಾರೆ ಮತ್ತು ಪರಿಹಾರಾರ್ಥವಾಗಿ ಅವರಿಂದ ವಿಚಾರಗಳನ್ನು ಪಡೆಯುತ್ತಾರೆ. ಆದರೆ ಸರಿಯಾದ ತಿಳುವಳಿಕೆಯಿಲ್ಲದ, ಸ್ವಾರ್ಥ ದೃಷ್ಟಿಯ ತಂತ್ರಿಗಳು ಈ ಸಂದರ್ಭವನ್ನು ಹೇಗೆ ಬಳಸಿಕೊಳ್ಳುತ್ತಾರೆ ಎಂಬುದನ್ನು ಇಲ್ಲಿ ಮುಖ್ಯವಾಗಿ ಗಮನಿಸಬಹುದು.

ಪಟೇಲರ ಪರಿಸರದಲ್ಲಿ ಹಾವು ಕಾಣಿಸಿಕೊಂಡಾಗ ಜನರಾಡುವ ಮಾತುಗಳು ಮತ್ತು ಅದಕ್ಕೆ ಕೊಡುವ ಕಾರಣಗಳು 'ಮೈಲಿಗೆಯಾಗಿರಬೇಕು, ಶುದ್ಧಮಾಡಿಕೊಳ್ಳಿ'

'ನಾಗದೋಷವಿರಬೇಕು ಅದನ್ನು ಪರಿಹಾರ' ಮಾಡಿದರಾಯಿತು. 'ಇಲ್ಲಾ ಹಾವಿಗೆ ಎಲ್ಲೋ ಪೆಟ್ಟಾಗಿರಬೇಕು, ಅದಕ್ಕೆ ದ್ವೇಷ ಸಾಧಿಸಲು ಬಂದ ಹಾಗಿದೆ' ಈ ಎಲ್ಲಾ ಮಾತುಗಳು ಜನರ ನಂಬಿಕೆ, ಮುಗ್ಧತೆಯುನ್ನು ಭಯ ಮತ್ತು ಭಕ್ತಿಯಿಂದ ಹೇಳುತ್ತದೆ. ಹಾವಿಗೆ ಮೈಲಿಗೆಯಾದುದರಿಂದ ಅದಕ್ಕೆ ಅರಸಿನ ಹುಡಿ ಕಲಸಿ ಅದರ ನೀರನ್ನು ಒಂದು ಪಾತ್ರೆಯಲ್ಲಿ ಹಾಕಿಡುವುದರಿಂದ ಅದು ತನ್ನನ್ನು ಅದರಲ್ಲಿ ಶುದ್ಧಮಾಡಿಕೊಂಡು ಹೋಗುತ್ತದೆ ಎಂಬ ಜನರ ನಂಬಿಕೆ ಗಮನಿಸತಕ್ಕ ವಿಚಾರವೇ ಆಗಿದೆ.

ಅನಾದಿಕಾಲದಿಂದಲೂ, ದೇವರು ದೈವದ ಹೆಸರಿನಲ್ಲಿ, ಧಾರ್ಮಿಕ ಆಚರಣೆ ನೆಪದಲ್ಲಿ ಹಣವನ್ನು ದೋಚುವ, ವಸೂಲಿ ಮಾಡುವ ತಂತ್ರಿಗಳ, ತಂತ್ರಗಳೂ ಇವರ ಕಾದಂಬರಿಗಳಲ್ಲಿ ಉಲ್ಲೇಖಗೊಳ್ಳುತ್ತವೆ. ಆ ಮೂಲಕ ಶತಮಾನಗಳಿಂದ ಆಗುತ್ತಿರುವ ಶೋಷಣೆಗಳನ್ನು ಸ್ಥೂಲವಾಗಿ ಪರಿಚಿಯಿಸುವ ಅಂಶಗಳು ಇಲ್ಲಿ ಇವೆ. ಪಟೇಲರ ಜಾಗದಲ್ಲಿ ನಾಗಹತ್ಯೆಯಾಗಿದೆ. ಅದಕ್ಕೆ ಪ್ರಯಾಶ್ಚಿತವಾಗಿ ಪಾತಾಳ ನಾಗನಿಗೆ ಸದ್ಗತಿಯಾಗಬೇಕು. ನಾಗಬನ ಕಟ್ಟಿಸಬೇಕು, ನಾಗಮಂಡಲವಾಗಬೇಕು, ಅನ್ನಸಂತರ್ಪಣೆ ನಡೆಸಬೇಕು ಆ ಮೂಲಕ ನಾಗಸಂಕುಲಕ್ಕೆ ಶಾಂತಿ ಸಿಗಬೇಕು ಎಂಬ ತಂತ್ರಿಗಳ ಹೇಳಿಕೆಗಳು ಅದುವರೆಗೆ ಹೆದರದೇ ಇದ್ದ ಪಟೇಲರನ್ನು ನಡುಗಿಸುತ್ತದೆ. ಇಲ್ಲಿ ಪಟೇಲರ ಈ ದೌರ್ಬಲ್ಯವನ್ನು ಅರ್ಥಮಾಡಿಕೊಂಡ ತಂತ್ರಿಗಳು ಅದನ್ನೇ ತನ್ನ ಬಂಡವಾಳವನ್ನಾಗಿ ಮಾಡುವ ಹುನ್ನಾರ ನಡೆಯುತ್ತದೆ.

ಇನ್ನೊಂದೆಡೆ ಹಾವುಗಳನ್ನು ಹಿಡಿಯುವುದನ್ನೇ ತಮ್ಮ ವೃತ್ತಿಗಳನ್ನಾಗಿ ಮಾಡಿಕೊಂಡ ಹಾವಾಡಿಗ ತಂಡ ಪಕ್ಕಾ ಅಲೆಮಾರಿಗಳಾದ ಇವರು ಬೇರೆ ಬೇರೆ ಸಂದರ್ಭಗಳಲ್ಲಿ ಮಾಡುವ ಉಪವೃತ್ತಿಗಳು, ಅವರ ವೇಷಭೂಷಣಗಳು ಒಂದು ಬಗೆಯಲ್ಲಿ ವಿಶಿಷ್ಟವಾದ ಸಂಸ್ಕೃತಿಯನ್ನೇ ಪ್ರತಿಬಿಂಬಿಸುತ್ತದೆ. ಹಾವು ಕಡಿತಕ್ಕೆ ಚಿಕಿತ್ಸೆ ಮಾಡುವುದು, ವಿಷ ಕಕ್ಕಿಸುವುದು, ಗರುಡ ಬೇರೆಂಬ ಬೇರುಗಳ ಮೂಲಕ ನಾಗನನ್ನು ನಿಯಂತ್ರಿಸುವುದು ಕಂಡುಬರುತ್ತದೆ. ಒಟ್ಟು ಇಲ್ಲಿ ತುಳುನಾಡಿನಲ್ಲಿ ಕಂಡು ಬರುವ ಬೇರೆ ಬೇರೆ ವರ್ಗದ ಜನರ ವೃತ್ತಿ, ವೃತ್ತಿಗಾಗಿ ಸಂದರ್ಭದ ಅವಕಾಶವನ್ನು ಸದುಪಯೋಗ ಪಡಿಸಿಕೊಳ್ಳುವ ಒಂದು ವರ್ಗ ಇಲ್ಲಿ ಕಾಣಬರುತ್ತದೆ. (ಪಟೇಲರಿಗೆ) ತನ್ನ ತೋಟದಲ್ಲಿ ನಿಧಿ ಸಿಕ್ಕಾಗ ಮತ್ತು ಮನೆಯ ಮಾಳಿಗೆಯಲ್ಲಿ ಶೇಖರಿಸಿಟ್ಟಿದ್ದ ಧಾನ್ಯದ ರಾಶಿ ದ್ವಿಗುಣವಾದ ಪಟೇಲರು ಮತ್ತು ಅವರ ಹೆಂಡತಿ ನಾಗ ದೇವರ ಮಹಿಮೆಯಿಂದ ಹೀಗಾಗಿರಬೇಕೆಂದು ಯೋಚಿಸಿ, ಅಲ್ಲಿಯವರೆಗೂ ನಾಗನನ್ನು ಸಾಗಹಾಗಲಿಕ್ಕೆ ನೋಡುತ್ತಿದ್ದರೂ ಭಯಭಕ್ತಿಯಿಂದ ಅದನ್ನು ಪೂಜಿಸಲು ಮುಂದಾಗುತ್ತಾರೆ. ಶುಚಿರ್ಭೂತರಾಗಿ, ಭಕ್ತಿ ಭಾವದಿಂದ ನಿಧಿ ತುಂಬಿದ ಕೊಪ್ಪರಿಗೆಯನ್ನು ತುಳಸಿಕಟ್ಟೆಯ ಮೇಲಿಟ್ಟು ಕುಲದೇವರಿಗೆ ಪ್ರಾರ್ಥನೆ ಸಲ್ಲಿಸಿ, ಹಜಾರದಲ್ಲಿ ಸುರಿದಾಗ ಅದರಲ್ಲಿದ್ದ ನಾಣ್ಯ, ಒಡವೆಗಳನ್ನು ಕಂಡು ದಂಪತಿಗಳೀರ್ವರೂ ರೋಮಾಂಚನಗೊಂಡು ದೇವರನ್ನು ಸ್ಮರಿಸುತ್ತಾರೆ.

ಆಗ ಮಾಡುವ ವಿಧಿವಿಧಾನಗಳ ದೃಷ್ಟಿಯಿಂದ ಮುಖ್ಯ ಆಗುತ್ತದೆ.

ಇಲ್ಲಿ ಗಮನಿಸಲೇ ಬೇಕಾದ ಇನ್ನೊಂದು ವಿಚಾರವೆಂದರೆ ಚವುಡನ ಮಗ ರುದ್ರೇಶ ಮತ್ತು ಕ್ರಿಶ್ಚಿಯನ್ ಹುಡುಗಿ ಲೂಸಿ ಇವರ ನಡುವೆ ಪ್ರೀತಿಉಂಟಾಗುತ್ತದೆ. ಸಮಾಜ ಇದನ್ನು ವಿರೋಧಿಸುತ್ತದೆ. ನಂತರ ಲೂಸಿಯ ತಂದೆ ನಾಗಗಳಿಗೆ ಸೇರಿದ ಒಂದು ಆಲದಮರವನ್ನು ಕಡಿಯುತ್ತಾರೆ. ಆಮೇಲೆ ಲೂಸಿಗೆ ಅನಾರೋಗ್ಯ ಕಾಡುತ್ತದೆ. ಆಗ ಜೋಯಿಸರ ಬಳಿ ಪ್ರಶ್ನೆ (ಬಲ್ಮೆ) ಕೇಳಿದಾಗ, ಅವರು ಹೇಳುವ ಮಾತು " ಇವಳಿಗೆ ನಾಗಸಂಬಂಧಿ ದೋಷವಿದೆ. ನಿಮ್ಮ ಜಾತಿಯವರಿಗೆ ಇದರಲ್ಲಿ ನಂಬಿಕೆಯಿಲ್ಲ ಎಂದೋ ? ನೋಡಿ ನಾಗಸಂಬಂಧಿ ದೋಷಗಳು ಜಾತಿ ಭೇದದ ಕಟ್ಟುಪಾಡನ್ನು ಮೀರಿ ನಿಂತಿದೆ. ಇದೆಲ್ಲಾ ಯಾವ ಡಾಕ್ಟ್ರರವರ ಮದ್ದಿಗೂ ಸಿಕ್ಕುವಂತಿಲ್ಲ (ತಂಬಿಲ:೨೦೦೦:೨೧೩) ಎಂಬ ಮಾತುಗಳು ನಾಗದೋಷ ಅನ್ನುವುದು ಯಾವುದೇ ಒಂದು ಧರ್ಮಕ್ಕೆ ಮಾತ್ರ ಇರುವಂತಹದಲ್ಲ. ಎಲ್ಲಾ ಧರ್ಮದವರಿಗೂ ಇದರ ಬಾಧೆ ಇದೆ ಎನ್ನುವುದನ್ನು ತಿಳಿಸುತ್ತದೆ. ಇಂದಿಗೂ ತುಳುನಾಡಿನಲ್ಲಿ ನಾಗಾರಾಧನೆ ನಾಗಪಂಚಮಿಯಂದು ಅನ್ಯಧರ್ಮದವರು ಹಿಂದೂಗಳೊಂದಿಗೆ ಪೂಜೆಗಳ ಕಾರ್ಯದಲ್ಲಿ ಭಾಗವಹಿಸುವುದು, ಹರಕೆ ಒಪ್ಪಿಸುವುದು ಕಂಡು ಬರುತ್ತದೆ. ಇಲ್ಲೆಲ್ಲಾ ಕಾದಂಬರಿಕಾರರು ಜಾತಿ ಸಾಮರಸ್ಯವನ್ನು ಸಮಾಜದಲ್ಲಿ ಕಾಪಾಡಿಕೊಂಡು ಬರುವಂತೆ ಕೊಡುವ ಸೂಚನೆಯೂ ಆಗಿರುತ್ತದೆ. ಇಂತಹ ಅನೇಕ ವಿಚಾರಗಳು ಅವರ ಕಾದಂಬರಿಗಳಲ್ಲಿ ಚಿತ್ರಿತಗೊಂಡಿದೆ. ಜಾತ್ಯಾತೀತ ತತ್ವಗಳನ್ನು ಜಾಹೀರುಗೊಳಿಸುವ ಅನೇಕ ಪಾತ್ರಗಳು ಇಲ್ಲಿ ಕಂಡು ಬರುತ್ತದೆ.

ನಾಗಾರಾಧನೆ, ನಾಗಮಂಡಲ, ನಾಗದರ್ಶನ ಮುಂತಾದ ಸೇವೆಯ ವಿವರಗಳು, ನಡೆಯುವ ಕಾಲ ಸನ್ನಿವೇಶ ಉದ್ದೇಶಗಳು, ಸಂದರ್ಭಕ್ಕನುಗುಣವಾಗಿ ಕಾದಂಬರಿಗಳಲ್ಲಿ ಚಿತ್ರಿತವಾಗಿದೆ. ನಾಗಬನ-ನಾಗ ಪ್ರತಿಷ್ಠೆ-ನಾಗಶಕ್ತಿಯ ವಶೀಕರಣ ಸಮಯದಲ್ಲಿ ಮಾಡುವ ವಿಧಿವಿಧಾನಗಳು ತುಳು ಸಂಸ್ಕೃತಿಯ ಜನರ ಭಯಭಕ್ತಿ, ಶ್ರದ್ದೆಯನ್ನು ಹೇಳುತ್ತದೆ. ಪ್ರತಿಯೊಂದು ಕ್ರಿಯೆಯನ್ನೂ ಅಚ್ಚುಕಟ್ಟಾಗಿ ನಿರ್ವಹಿಸುವ ಬಗ್ಗೆ ಧಾರ್ಮಿಕವಾದ ಪರಂಪರೆಯನ್ನು ಉಳಿಸಿಕೊಂಡ ಬಗೆಯನ್ನು ಲೇಖಕರು ತಿಳಿಸುತ್ತಾರೆ.

ತಂಬಿಲ' ಕಾದಂಬರಿಯಲ್ಲಿ 'ಬೆರ್ಮರೆಪಾದ' ಎನ್ನುವ ಪ್ರದೇಶ ಬರುತ್ತದೆ. ಇದು ಅಪೂರ್ವ ಪ್ರಕೃತಿ ಸೌಂದರ್ಯವುಳ್ಳ ನಾಗಮಲೆಯಾಗಿತ್ತು. ಇಲ್ಲಿಗೆ ಒಮ್ಮೆ ನಾಗ-ಯಕ್ಷಿಣಿಯೋರ್ವಳು ವಿಹಾರಾರ್ಥವಾಗಿ ಬಂದಾಗ ಕಾಮುಕನಾದ ಹರಿಪಟೇಲನೋರ್ವ ಆಕೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳಲು ಶತಪ್ರಯತ್ನ ಮಾಡಿ, ಆಕೆಯ ಸ್ನೇಹಿತೆಯರನ್ನೆಲ್ಲಾ ಕೊಂದು, ಯಕ್ಷಿಣಿಯನ್ನು ಮುಟ್ಟಲು ಹೋದಾಗ ಆಕೆ ಹಾವಾಗಿ ಪರಿಣಮಿಸಿ, ನಂತರ ಆಕೆಯಲ್ಲಿದ್ದ ನಾಗಮಣಿಯನ್ನು ಪಡೆದು ಅದರ ಪ್ರಭಾವದಿಂದ ತನಗೆ ಬೇಕಾದುದನ್ನೆಲ್ಲವನ್ನು ಪಡೆದುಕೊಂಡು ಹಾವುಗಳನ್ನು ತನ್ನ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಾನೆ. ಕೊನೆಗೆ ಹಾವಿನ

ದ್ವೇಷದಿಂದ ತನ್ನ ಹೆಂಡತಿಯ ಕೈಯಲ್ಲಿಯೇ ಹತನಾಗುತ್ತಾನೆ. ಇದು ಪ್ರಕೃತಿಯ ದಂಡನೆಗೆ ಸತ್ಯ ಸಾಕ್ಷಿಯಾಗುತ್ತದೆ. ಪ್ರಕೃತಿಗೆ ವಿರುದ್ಧವಾಗಿ ಮಾನವ ಹೋದಾಗ ಅಲ್ಲಾಗುವ ಅವಾಂತರಗಳೇನು ? ಎಂಬುದು ಇಲ್ಲಿ ತಿಳಿಯುತ್ತದೆ.

ನಾಗಸಂಕುಲವನ್ನು ಹತ್ಯಗೈದ ಓರಿಪಟೇಲನ ಅಹಂಕಾರದ ಫಲಕ್ಕೆ ಪ್ರಾಯಶ್ಚಿತ್ತ ಮಾಡದೇ ಹೋದರೆ ಮುಂದೆ ವಿಪತ್ತು ಬರುತ್ತದೆ ಎಂಬ ಹೇಳಿ ಜೋಯಿಸರು ಸೂಚಿಸುವ ಪ್ರಾಯಶ್ಚಿತ್ತ 'ಪ್ರತಿದಿನ ನಾಗನಿಗೆ ಹಾಲು, ಸೀಯಾಳ, ಅಭಿಷೇಕವಾಗಬೇಕು. ಪ್ರತಿ ತಿಂಗಳ ಪಂಚಮಿಯಂದು ತಂಬಿಲ ನಡೆಸಬೇಕು, ಇನ್ನು ನಿಮ್ಮ ಶಕ್ತ್ಯಾನುಸಾರ ಅಶ್ಲೇಷಬಲಿ, ನಾಗಾರಾಧನೆ ಮಾಡಬಹುದು. ಅಂತೂ ಯಾವುದನ್ನೂ ಬೇಕಾಬಿಟ್ಟಿಯಾಗಿ ಮಾಡದೇ ಬಹಳ ಶುದ್ಧದಿಂದ ಭಕ್ತಿಯಿಂದ ಅರ್ಚಿಸಿದಲ್ಲಿ ನಾಗರಾಜನ ಕೃಪೆಗೆ ಪಾತ್ರರಾಗಿ ಮನಕ್ಲೇಷವೆಲ್ಲ ನಿವಾರಣೆಯಾಗುತ್ತವೆ' ಎಂದು ಪಟೇಲರಿಗೆ ಹೇಳುತ್ತಾರೆ (ತಂಬಿಲ;೨೦೦೦,೨೧೩) ಇಲ್ಲಿ ನಾಗಾರಾಧನೆಗೆ ಸಂಬಂಧಪಟ್ಟ ಸಂಸ್ಕೃತಿಯ ಹೊಸ ಆಯಾಮವೊಂದನ್ನು ಪರಿಚಯಿಸಿದ್ದಾರೆ.

ನಾಗಾರಾಧನೆಯ ಸುಸಂಸ್ಕೃತವಾದ ಆಯಾಮವೆಂದರೆ ಜೋಯಿಸರು ಪ್ರತಿಪಾದಿಸುವ ಪ್ರಕೃತಿ ಆರಾಧನೆ. ನಾಗಬನವೆಂದರೆ ಅದು ಸಿಮೆಂಟಿನಿಂದ ರಚನೆಯಾದುದಲ್ಲ, ಅದು ಮರಗಿಡಬಳ್ಳಿ ಗಳಿರುವಲ್ಲಿ ಇರಬೇಕು ; ಎಂದುಕೊಂಡ ಜೋಯಿಸರು ಪಟೇಲರನ್ನು ಕುರಿತು ಈ ರೀತಿ ಹೇಳುತ್ತಾರೆ ನಾಗಸಂಪತ್ತು, ಸಂತಾನ, ಸುಂದರ ಪರಿಸರ ಕ್ರಮ, ಸಮೃದ್ಧಿಯ ಸೂಚಕವಾಗಿದ್ದು, ಇದರ ಅನುಗ್ರಹಕಾರನಾದ ನಾಗದೇವನನ್ನು ಆರಾಧಿಸುವ ತಾಣವೇ ನಾಗಬನ. ಅದು ಪ್ರಕೃತಿಯ ನಡುವಿರಬೇಕು. ನೂರಾರು ಪಕ್ಷಿ ಸಂತತಿಗಳಿಗೆ ಜಲಚರಗಳಿಗೆ ಆಶ್ರಯತಾಣವಾಗಿರಬೇಕು' ಎಂದು ಹೇಳುವ ಮೂಲಕ ನಮ್ಮ ಜನ ಪ್ರಕೃತಿಯನ್ನು ನಾಶ ಮಾಡಿ ನಾಗನನ್ನು ಪೂಜಿಸುವ ಕ್ರಮ ಸರಿಯಲ್ಲ ; ಅದು ನಿಜವಾದ ಪ್ರಕೃತಿಯಾರಾಧನೆ ಅಲ್ಲ ಎಂದು ಜೋಯಿಸರ ಮೂಲಕ ಲೇಖಕರು ಹೇಳುವ ವಿಚಾರ ಜನರು ನಾಗನನ್ನು ಪೂಜಿಸುವ ಮೂಲ ಆಶಯವನ್ನು ಮರೆತುದನ್ನು ತಿಳಿಸುತ್ತದೆ ಹಾಗೂ ಪ್ರಕೃತಿಯನ್ನು ಸಂರಕ್ಷಿಸಬೇಕಾದ ಅಗತ್ಯತೆಯನ್ನು ಮನದಟ್ಟು ಮಾಡುತ್ತದೆ.

ದಕ್ಷಿಣ ಕನ್ನಡದ ತುಳು ಸಂಸ್ಕೃತಿಯಲ್ಲಿ ಈಗಾಗಲೇ ಚಾಲ್ತಿಯಲ್ಲಿರುವ ನಾಗಸಂಬಂಧಿ ನಂಬಿಕೆಗಳು, ಐತಿಹ್ಯಗಳು, ಆರಾಧನಾ ವಿವರಗಳು ಸಂದರ್ಭೋಚಿತವಾಗಿ ಇಲ್ಲಿ ವಿವರಿಸಲ್ಪಟ್ಟಿದೆ. ನಾಗಸಂಬಂಧೀ ದೋಷಗಳು ಹಾಗೂ ಪರಿಹಾರವನ್ನು ಇಲ್ಲಿ ತಿಳಿಸಲಾಗಿದೆ. ನವ್ಯಸಾಹಿತ್ಯದ ಲಕ್ಷಣಗಳನ್ನು ಒಳಗೊಂಡ ನೀರುಮಾರ್ಗರವರ ಕಾದಂಬರಿ ತಂಬಿಲ'ದಲ್ಲಿ ಬರುವ ವಿಚಾರಗಳನ್ನು ಗಮನಿಸಿದಾಗ ಇಂತಹುದೇ ಅಂಶಗಳು, ಘಟನೆಗಳು, ಗಿರೀಶ್ ಕಾರ್ನಾಡ್‌ರವರ ನಾಗಮಂಡಲ' ನಾಟಕದಲ್ಲಿಯೂ ಚಂದ್ರಶೇಖರ ಕಂಬಾರರ ಸಿರಿಸಂಪಿಗೆ' ನಾಟಕದಲ್ಲಿಯೂ ಕಂಡು ಬರುತ್ತದೆ. ಈ ಕೃತಿಗಳಲ್ಲಿ ನಾಗನನ್ನು ಕಾಮಕ್ಕೆ ಸಂಕೇತವಾಗಿ

ಬಳಸಿಕೊಂಡಂತೆ 'ತಂಬಿಲ' ಕಾದಂಬರಿಯಲ್ಲಿಯೂ ಬಳಕೆಯಾಗಿದೆ.

ಕುಕ್ಕೆ ಸುಬ್ರಹ್ಮಣ್ಯ ಹಾಗೂ ಕುಡುಪು ದೇವಸ್ಥಾನ ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖ ನಾಗಾರಾಧನಾ ಕೇಂದ್ರಗಳಾಗಿವೆ. ಇವರ ಕಾದಂಬರಿಯಲ್ಲಿ ಚಿತ್ರಿಸಲ್ಪಟ್ಟಂತೆ ಭಕ್ತರು ಕುಡುಪು ಅನಂತಪದ್ಮನಾಭ ಮತ್ತು ಸುಬ್ರಹ್ಮಣ್ಯದ ಸುಬ್ರಹ್ಮಣ್ಯೇಶ್ವರನಿಗೆ ಹರಕೆ ಹೊರುವುದು, ಕಾಣಿಕೆ ಅರ್ಪಿಸುವುದು ವಾಸ್ತವದ ಸಂಗತಿಯೇ ಆಗಿದೆ. ತುಳುವರು ತಮ್ಮ ಮೂಲದೈವವಾದ ನಾಗನನ್ನು ನಾಗಬೆರ್ಮೆರ್' ಎಂದು ಕರೆಯುತ್ತಿದ್ದರು ಮತ್ತು ಈಗಲೂ ಕರೆಯುತ್ತಿದ್ದಾರೆ.

ನಾಗಾರಾಧನೆ ತುಳುನಾಡಿನ ಒಂದು ವಿಶಿಷ್ಟವಾದ ಆರಾಧನಾ ಪದ್ಧತಿ. ಭಾರತಾದ್ಯಂತ ನಾಗರ ಪಂಚಮಿಯಂದು ನಾಗನನ್ನು ಆರಾಧಿಸುವ ಸಂಪ್ರದಾಯವಿದೆ. ಹೇರಳ ಧನಸಂಪಾದನೆಯನ್ನು ಮಾಡುವ ಉದ್ದೇಶದಿಂದ ನಾಗನ ಕುರಿತಾಗಿ ಕಟ್ಟುಕತೆಗಳನ್ನು ಸೃಷ್ಟಿಸಿ ಶ್ರೀಮಂತರಾದ ಮುಗ್ಧ ಜನರನ್ನು ಹೇಗೆ ವಂಚಿಸಲಾಗುತ್ತಿತ್ತು ಎನ್ನುವುದಕ್ಕೆ ಇಲ್ಲಿ ವಿವರಗಳು ಸಿಗುತ್ತವೆ. ನಾಗಮಂಡಲದಂತಹ ಹರಕೆಯಲ್ಲಿ ಅನ್ನದಾನ ಪ್ರಧಾನವಾದುದು. ನಾಗದೋಷದಿಂದ ಉಂಟಾಗುವ ತೊಂದರೆಗಳಿಗೆ ಪರಿಹಾರವಾಗಿ ನಾಗಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುವುದು ಸಾಮಾನ್ಯ. ನಾಗಪ್ರತಿಷ್ಠೆ, ಆಶ್ಲೇಷ ಬಲಿ, ನಾಗದರ್ಶನ, ಡಕ್ಕೆ ಬಲಿ, ನಾಗಮಂಡಲ, ತಂಬಿಲ ಇತ್ಯಾದಿ ಸೇವೆಗಳಿಂದ ನಾಗನನ್ನು ಪೂಜಿಸುತ್ತಾರೆ. ನಾಗನಿಗೆ ಸಸ್ಯಗಳಿಂದ ಒಡಗೂಡಿದ ತಂಪಾದ ಪ್ರದೇಶವೇ ಸರಿಯಾದುದು ಎಂಬುದು ನೀರಮಾರ್ಗರವರ ಕಾದಂಬರಿಯಲ್ಲಿ ಕಂಡು ಬರುತ್ತದೆ.

ನಾಗನ ಆರಾಧನೆಯ ಸ್ಥಳ 'ವನ' ಇಂದು ತುಳುವಿನಲ್ಲಿ 'ಬನ' ಆಗಿದೆ. ತುಳುವರು ತಮ್ಮ ಮೂಲ ದೈವವಾದ ನಾಗನನ್ನು ನಾಗಬೆರ್ಮೆರ್ ಎಂದು ಕರೆಯುವವಂತೆ ಸುಬ್ರಾಯ, ಸುಬ್ರಹ್ಮಣ್ಯ ಎನ್ನು ಹೆಸರಿನಿಂದಲೂ ಕರೆಯುತ್ತಾರೆ. ಒಟ್ಟಿನಲ್ಲಿ ನೀರುಮಾರ್ಗ ಅವರ ಬರೆಹಗಳಲ್ಲಿ ದಕ್ಷಿಣಕನ್ನಡ ಜಿಲ್ಲೆಯ ಜನಜೀವನದಲ್ಲಿ ಅರಾಧನೆಗಳು ತುಂಬಿಕೊಂಡ ಬಗೆ ಹಾಗೂ ಅದರ ಪರಿಣಾಮಗಳು ದಟ್ಟವಾಗಿ ಕಂಡುಬರುತ್ತವೆ.

ಯಾವುದೇ ಒಂದು ಪ್ರದೇಶದ ನಿರ್ದಿಷ್ಟ ಸಂಸ್ಕೃತಿಯನ್ನು ಕುರಿತು ಅಧ್ಯಯನ ಮಾಡುವಾಗ ಅದಕ್ಕೆ ಸಂಬಂಧಿಸಿದ ಕೆಲವೊಂದು ಅನನ್ಯತೆಗಳನ್ನು ನಿರೂಪಿಸುವುದು ಮುಖ್ಯವಾಗುತ್ತದೆ. ಸಂಸ್ಕೃತಿಯನ್ನು ಪ್ರತಿನಿಧೀಕರಿಸುವ ಆಚಾರವಿಚಾರಗಳು, ಕಲಾಭಿವ್ಯಕ್ತಿಯ ಉದ್ದೇಶಗಳಿಗಾಗಿ ಉಪಯೋಗಿಸುವ ಪರಿಕರಗಳು ಇಲ್ಲಿ ಮಹತ್ವವನ್ನು ಪಡೆಯುತ್ತದೆ. ಸಂಸ್ಕೃತಿಯ ಸಂಬಂಧವಾಗಿ ಧಾರ್ಮಿಕ ವಿಚಾರಗಳು ಮುಖ್ಯ ಪಾತ್ರ ವಹಿಸುವವು. ಇಲ್ಲಿ ನಂಬಿಕೆಗಳು ಮತ್ತು ಅದಕ್ಕೆ ಪೂರಕವಾದ ಆಚರಣೆಗಳು ನಿರ್ಧಿಷ್ಟ ಪ್ರದೇಶದ ಧಾರ್ಮಿಕ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ.

- ಶ್ರೀ ಪ್ರಭಾಕರ ನೀರ್‌ಮಾರ್ಗರವರ ಕಾದಂಬರಿಗಳಲ್ಲಿ ಕಂಡುಬರುವ ಬಹುತೇಕ ವಿಚಾರಗಳು ತುಳುನಾಡಿನ ಧಾರ್ಮಿಕ ವಿಚಾರಗಳನ್ನು ಕಟ್ಟಿಕೊಡುವುದರಲ್ಲಿ ಯಶಸ್ವಿಯಾಗಿವೆ. ತುಳುವರ ಬದುಕು ಮತ್ತು ಚಿಂತನಾ ಕ್ರಮಗಳು, ಪರಂಪರಾಗತವಾಗಿ ಆಚರಿಸಿಕೊಂಡು ಬಂದಿರುವಂತಹ ರೂಢಿ ಸಂಪ್ರದಾಯಗಳು ಇಲ್ಲಿ ಚಿತ್ರಣಗೊಂಡಿವೆ. ತುಳುನಾಡಿನ ಜನರ ಆಚರಣೆ ಮತ್ತು ನಂಬಿಕೆಗಳು ಒಂದಕ್ಕೊಂದು
ಅನಿವಾರ್ಯವೆಂಬಂತೆ ತೋರಿಬರುತ್ತದೆ.
- ಇಂದು ಕಣ್ಮರೆಯಾಗುತ್ತಿರುವ ಆದರೆ ತುಳುನಾಡಿನ ಪ್ರಾಚೀನ ಸಮಾಜದಲ್ಲಿ ಇದ್ದಂತಹ ನಂಬಿಕೆಗಳು, ಪದ್ಧತಿಗಳು ಇಲ್ಲಿ ಉಲ್ಲೇಖಿಗೊಂಡಿದೆ. ತುಳುನಾಡಿನ ದೈವಾರಾಧನೆ ಮತ್ತು ನಾಗಾರಾಧನಾ ಪ್ರಪಂಚವು ವಿಸ್ಮಯಗೊಳಿಸುವಂತಹುದು. ಸಂಸ್ಕೃತಿಯ ಜೀವಾಳದ ಭಾಗವೇ ಧರ್ಮ ಎನ್ನುವಂತಿಹುದು ಗಮನಾರ್ಹ ವಿಚಾರ.
- ಈ ಧರ್ಮ ಎಂಬ ಪದಕ್ಕೆ ಕಾದಂಬರಿಯು ಬೇರೆ ಬೇರೆ ಸನ್ನಿವೇಶಗಳಲ್ಲಿ ಸಾಂದರ್ಭಿಕವಾದ ವ್ಯಾಖ್ಯಾನವನ್ನು ನೀಡುತ್ತಾ ಕಾದಂಬರಿಯ ವಿವರಗಳನ್ನು ನೀರುಮಾರ್ಗರವರು ನೀಡುತ್ತಾರೆ. ಆರಾಧನಾ ರಂಗವೂ ಧಾರ್ಮಿಕ ಆಚರಣೆಯ ಒಂದು ಮುಖ್ಯವಾದ ಭಾಗ ಎನ್ನುವಂತೆ ಇಲ್ಲಿ ಬರುವ ಆರಾಧನೆಗಳು ಮನದಟ್ಟು ಮಾಡುತ್ತದೆ. ಧಾರ್ಮಿಕ ಸಂಸ್ಕೃತಿಯ ಸಾರದಲ್ಲಿ ಮನುಷ್ಯ ತನ್ನ ಬದುಕನ್ನು ರೂಪಿಸಿಕೊಂಡಿರುವಂತಹುದು ವಿಶಿಷ್ಟವಾದುದು. ಗ್ರಾಮೀಣ ಸಂಸ್ಕೃತಿಗಳಲ್ಲಿ ಧಾರ್ಮಿಕವಾದ ಆರಾಧನೆಗಳು ಅಥವಾ ಆಚರಣೆಗಳು ಎಷ್ಟು ಪ್ರಧಾನವಾಗಿತ್ತು ಎನ್ನುವ ಮಹತ್ವದ ಅಂಶಗಳನ್ನು ಮನನ ಮಾಡಿಕೊಳ್ಳುವುದಕ್ಕೆ ಇಲ್ಲಿಯ ಅಧ್ಯಯನವು ಸಹಕಾರಿಯಾಗಿವೆ.
- ಪ್ರಾದೇಶಿಕ ಸೊಗಡು, ಆಧುನಿಕ ಮನೋಧರ್ಮಗಳು ಒಂದು ಸಮಾಜದ ಮೌಲ್ಯಗಳನ್ನು ಕಟ್ಟುವ ಮತ್ತು ಒಡೆಯುವ ಪ್ರಕ್ರಿಯೆಗಳು ಇಲ್ಲಿಯ ಅಧ್ಯಯನದಿಂದ ಫಲಿತವಾಗುತ್ತದೆ.
- ಜಾತಿವಾದಿ, ಕೋಮುವಾದಿ ಶಕ್ತಿಗಳು ಹೆಚ್ಚುತ್ತಾ ಒಂದು ಸಮಾಜದ ಸ್ವಾಸ್ಥ್ಯವನ್ನು ಕೆಡಿಸುವ ಬಗ್ಗೆ ಆತಂಕವನ್ನು ತಾಳಿರುವ ನೀರ್‌ಮಾರ್ಗರವರು ಆ ಬಗ್ಗೆ ಜಾಗರೂಕರಾಗಿರಬೇಕಾದ ಸಂದರ್ಭದ ಸಲಹೆಯನ್ನು ನೀಡುತ್ತಾರೆ. ಒಟ್ಟಿನಲ್ಲಿ ಸಮಷ್ಟಿಯ

ಪ್ರಜ್ಞೆಯನ್ನು ಇವರ ಬರಹಗಳಲ್ಲಿ ಗುರುತಿಸುವುದಕ್ಕೆ ಸಾಧ್ಯವಾಗುತ್ತದೆ.

- ನಿರ್ದಿಷ್ಟ ಪ್ರದೇಶದ ಪರಿಮಿತಿಯಿರಿಸಿಕೊಂಡು ಕೃತಿಯೊಂದನ್ನು ರಚಿಸುವಾಗ ಸ್ಥಳ ಹಾಗೂ ಕಾಲ ಮತ್ತು ಪ್ರಾದೇಶಿಕ ಸಂಸ್ಕೃತಿಯ ನಡುವೆ ಸಂಘಟನೆ ಅತ್ಯಗತ್ಯ. ನೀರುಮಾರ್ಗ ಅವರ ಕೃತಿಗಳಲ್ಲಿ ಭಾಷೆ, ಸಂಸ್ಕೃತಿ ಮಾತ್ರವಲ್ಲ ಮಾನವ ಸಂಬಂಧಗಳ ನಡುವಿನ ಸೂಕ್ಷ್ಮ ಭಾವಗಳೂ ಸೇರಿಕೊಂಡು ಕೃತಿ ಸಂವಿಧಾನ ಗಟ್ಟಿಗೊಳ್ಳುತ್ತದೆ. ಇಲ್ಲಿ ಮಾನವೀಯ ಸಂಬಂಧಗಳ ತಳಹದಿಯಲ್ಲಿ ಕೌಟುಂಬಿಕ ಸಂಬಂಧಗಳು ಹಾಗೂ ಸಾಮಾಜಿಕ ಸಂಬಂಧಗಳು ಪ್ರಕಟಗೊಳ್ಳುತ್ತವೆ.

## ೬. ಪರಾಮರ್ಶನ ಗ್ರಂಥಗಳು


೧. ಹಾ.ಮಾ. ನಾಯಕ್ ೧೯೭೧
ಜಾನಪದ ಸ್ವರೂಪ
ಟಿ.ವಿ.ಮೆಮೋರಿಯಲ್ ಸೀರೀಸ್, ಮೈಸೂರು

೨. ಡಾ. ಬಿ.ಎ. ವಿವೇಕ ರೈ ೧೯೮೫
ತುಳು ಜನಪದ ಸಾಹಿತ್ಯ
ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜ ಪೇಟೆ ಬೆಂಗಳೂರು

೩. ಪಾಲ್ತಾಡಿ ರಾಮಕೃಷ್ಣ ಆಚಾರ್ ೧೯೯೦
ಸಂವಹನ ಮಾಧ್ಯಮವಾಗಿ ಜನಪದ ಕುಣಿತಗಳು
ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ

೪. ತುಕಾರಾಂ ಪೂಜಾರಿ (ಸಂ) ೧೯೯೨
ಕಣ್ಮರೆಯಾಗುತ್ತಿರುವ ತುಳುಬದುಕು
ರಾಣಿ ಅಬ್ಬಕ್ಕ ತುಳು ಅಧ್ಯಯನ ಕೇಂದ್ರ ಬಂಟ್ವಾಳ

೫. ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ ೧೯೯೭
ಜಾನಪದ ಮಿನದನ
ಸುಪ್ರಿಯ ಪ್ರಕಾಶನ ದರ್ಭೆ, ಪುತ್ತೂರು

೬. ಡಾ. ಪುಂಡಿಕ್ಯಾ ಗಣಪಯ್ಯ ಭಟ್ ೧೯೯೭
ತೌಳವ
ಸಿಂಧೂರ ಪ್ರಕಾಶನ ಪುಂಡಿಕ್ಯಾ
ಕಂಡಗಲ್ಲು ಮೂಡಬಿದಿರೆ

೭. ಉದಯವರ್ಮ ರಾಜ ೧೯೯೮
ತುಳುನಾಡಿನ ಗತವೈಭವ
ಕನ್ನಡ ಸಾಹಿತ್ಯ ಪರಿಷತ್ತು ಕೇರಳ

೮. ವೆಂಕಟರಾಜ ಪುಣಿಂಚಿತ್ತಾಯ ೧೯೯೮
ತುಳು ನಡೆನುಡಿ
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ
ಉಡುಪಿ-೫೭೬೧೦೨

೯. ನಾಗವೇಣಿ. ಎಚ್ ೧೯೯೯
ಗಾಂಧಿ ಬಂದ
ಲೋಹಿಯಾ ಪ್ರಕಾಶನ
'ಕ್ಷಿತಿಜ' ಕಪ್ಪಗಲ್ಲು ರೋಡ್
ಗಾಂಧಿ ನಗರ, ಬಳ್ಳಾರಿ

೧೦. ಕೆ. ಮೋಹನ ಕೃಷ್ಣ ರೈ ೧೯೯೯
ತುಳು ಸಂಸ್ಕೃತಿ ಚತುರ್ಮುಖೀ ಅಧ್ಯಯನ
ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾನಿಲಯ, ಹಂಪಿ

೧೧. ಡಾ। ಗಣನಾಥ ಎಕ್ಕಾರು ೨೦೦೦
ತುಳುನಾಡಿನ ಜನಪದ ಆಟಗಳು
ಜ್ಞಾನೋದಯ ಪ್ರಕಾಶನ
ಬಸವೇಶ್ವರ ನಗರ ಬೆಂಗಳೂರು

೧೨. ಮುದ್ದು ಮೂಡುಬೆಳ್ಳೆ ೨೦೦೩
ನಾಡು ನುಡಿಯಿದೊಂದು ಬಗೆ ( ಅಧ್ಯಯನ)
ಹೇಮಾಂಶು ಪ್ರಕಾಶನ
'ದೃಶ್ಯ' ಗೊಲ್ಲಚ್ಚಿಲ್
ಉರ್ವಸ್ಟೋರ್ ಮಂಗಳೂರು

೧೩. ಪ್ರೊ॥ ತುಕಾರಾಂ ಪೂಜಾರಿ ( ಸಂ) ೨೦೦೬
ತತ್ವಾನ್ವೇಷಣೆ
ಸ್ವಾತಂತ್ರ್ಯ ಹೋರಾಟಗಾರ ಡಾ। ಅಮ್ಮೆಂಬಳ ಬಾಳಪ್ಪ ಅಭಿನಂದನಾ ಗ್ರಂಥ
ಡಾ। ಅಮ್ಮೆಂಬಳ ಬಾಳಪ್ಪ ಅಭಿನಂದನಾ ಸಮಿತಿ ಬಂಟ್ವಾಳ

೧೪. ಡಾ. ಅಮೃತ ಸೋಮೇಶ್ವರ ೨೦೦೭
ತುಳುವ ಜಾನಪದ: ಕೆಲವು ನೋಟಗಳು
ಪ್ರೊ। ಮಲ್ಲೇಪುರಂ ಜಿ. ವೆಂಕಟೇಶ
ನಿರ್ದೇಶಕರು, ಪ್ರಸಾರಾಂಗ
ಕನ್ನಡವಿಶ್ವವಿದ್ಯಾನಿದ್ಯಾನಿಲಯ ಹಂಪಿ

೧೫. ಡಾ। ಬಿ.ಎ. ವಿವೇಕ ರೈ (ಸಂ) ೨೦೦೭
ತುಳು ಸಾಹಿತ್ಯ ಚರಿತ್ರೆ
ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾನಿಲಯ, ಹಂಪಿ

೧೬. ಡಾ. ರಾಜಶ್ರಿ ೨೦೦೮
ತುಳು ಜನಪದ ಕಾವ್ಯ ಇಹಪರ ಲೋಕದೃಷ್ಟಿ
ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ತುಳು ಪೀಠ
ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳ ಗಂಗೋತ್ರಿ

೧೭. ಡಾ. ಸುಂದರ ಕೇನಾಜೆ ೨೦೦೯
ಬತ್ತದ ಲೋಕ
ತುಳುನಾಡಿನ ಬತ್ತದ ಬೇಸಾಯ– ಜಾನಪದ ಅಧ್ಯಯನ
ಸಿಂಚು ಮಲ್ಟಿಗ್ರಾಫ್
೩.೯೯, ಹಂತ, ಕೆ.ಎಚ್.ಬಿ. ಕಾಲೋನಿ
ಕುವೆಂಪುನಗರ ಮೈಸೂರು

## ಪ್ರಭಾಕರ ನೀರ್‌ಮಾರ್ಗ ಅವರ ಕೃತಿಗಳು

೧. ದಾಯಿತ್ವ ೧೯೯೭
ಹೇಮಾಂಶು ಪ್ರಕಾಶನ
ಮಂಗಳೂರು -೫೭೫೦೦೬

೨. ಶಿಶಿರ ೧೯೯೮
ಹೇಮಾಂಶು ಪ್ರಕಾಶನ
ಮಂಗಳೂರು- ೫೭೫೦೦೬

೩. ಪ್ರತಿಶೋಧ ೧೯೯೯
ಹೇಮಾಂಶು ಪ್ರಕಾಶನ
ಮಂಗಳೂರು- ೫೭೫೦೦೬

೪. ತಿಲ್ಲಾನ ೨೦೦೦
ಹೇಮಾಂಶು ಪ್ರಕಾಶನ
ಮಂಗಳೂರು- ೫೭೫೦೦೬

೫. ಧೀಂಗಿಣ ೨೦೦೧
ಹೇಮಾಂಶು ಪ್ರಕಾಶನ
ಮಂಗಳೂರು -೫೭೫೦೦೬

೬. ಅರ್ಘ್ಯ, ೨೦೦೨
ಪ್ರಕಾಶನ: ಸಾಹಿತ್ಯ ಸಂಸ್ಕೃತಿ ವೇದಿಕೆ, ಬೆಳ್ಳೆ ಮೂಡುಬೆಳ್ಳೆ

೭. ತಂಬಿಲ ೨೦೦೩
ಶೇಣಿ ಪ್ರಕಾಶನ , ಶೇಣಿ

೮. ದಳವಾಯಿ ದುಗ್ಗಣ ೨೦೦೩
ಸಿರಿಪ್ರಕಾಶನ, ಮಂಗಳೂರು

೯. ಭೀಕರ ನ್ಯಾಯ ಕಟ್ಟೆ ೨೦೦೪
ಹೇಮಾವತಿ ಪ್ರಕಾಶನ, ನೀರ್‌ಮಾರ್ಗ, ಪೆದಮಾಲೆ ಅಂಚೆ,
ವಯಾ: ಕುಲಶೇಖರ
ಮಂಗಳೂರು- ೫೭೫೦೨೬

೧೦. ಕಂಬುಲ ೨೦೦೫
ಹೇಮಾವತಿ ಪ್ರಕಾಶನ, ನೀರ್‌ಮಾರ್ಗ, ಪೆದಮಾಲೆ ಅಂಚೆ,
ವಯಾ: ಕುಲಶೇಖರ
ಮಂಗಳೂರು- ೫೭೫೦೨೬

೧೧. ಮಂಗಳೂರು ಕ್ರಾಂತಿ ೨೦೦೬
ಹೇಮಾವತಿ ಪ್ರಕಾಶನ, ನೀರ್‌ಮಾರ್ಗ, ಪೆದಮಾಲೆ ಅಂಚೆ,
ವಯ: ಕುಲಶೇಖರ
ಮಂಗಳೂರು- ೫೭೫೦೨೯

೧೨. ಮಾದಿರ, ೨೦೦೭
ಹೇಮಾವತಿ ಪ್ರಕಾಶನ, ನೀರ್‌ಮಾರ್ಗ, ಪೆದಮಾಲೆ ಅಂಚೆ,
ವಯ: ಕುಲಶೇಖರ
ಮಂಗಳೂರು- ೫೭೫೦೨೯

೧೩. ಮದಿಪು ೨೦೦೮
ಪ್ರಕಾಶರು : ಹೇಮಾವತಿ ಪ್ರಕಾಶನ
ನೀರ್‌ಮಾರ್ಗ, ಮಂಗಳೂರು

೧೪. ಮಥನ ೨೦೦೯
ಹೇಮಾವತಿ ಪ್ರಕಾಶನ, ನೀರ್‌ಮಾರ್ಗ, ಪೆದಮಾಲೆ ಅಂಚೆ,
ವಯ: ಕುಲಶೇಖರ ಮಂಗಳೂರು- ೫೭೫೦೨೯

# ೭. ಅನುಬಂಧ

೧. ಸಂದರ್ಶನ

೨. ನೀರ್‌ಮಾರ್ಗ ಅವರ ಭಾವಚಿತ್ರ

೩. ಕಾದಂಬರಿಗಳ ಛಾಯಾರೂಪ

೪. ಪಾರಿಭಾಷಿಕ ಪದಗಳ ಅರ್ಥ

## ಸಂದರ್ಶನ

**ಸಂದರ್ಶಕ ಪ್ರ ೧ : ನಿಮ್ಮ ಸಾಹಿತ್ಯ ರಚನೆಗೆ ಪ್ರೇರಣೆ ಏನು?**

ಉ : ನಾನು ಮಂಗಳೂರಿನ ಸಾಮಾನ್ಯ ಹಳಿಯೊಂದರಲ್ಲಿ ಹುಟ್ಟಿ ಬೆಳೆದವನು. ನಮ್ಮದು ಪುಟ್ಟ ಸುಸಂಸ್ಕೃತ ಕುಟುಂಬ. ಹಿರಿಯರ ಕಾಲದಿಂದಲೂ ಓದುವ ಸಂಪದಾಯವಿತ್ತು. ಆ ಕಾರಣದಿಂದ ಒಳ್ಳೆಯ ಪುಸ್ತಕಗಳು ಮನೆಯಲ್ಲಿ ಇರುತ್ತಿದ್ದವು. ಆದ್ದರಿಂದ ಬಾಲ್ಯದಿಂದಲೂ ಓದು ಮತ್ತು ಬರವಣಿಗೆಯಲ್ಲಿ ಆಸಕ್ತಿಯಿತ್ತು. ಬಾಲ್ಯದ ದಿನಗಳು ಹಾಗೂ ನನ್ನ ಕನ್ನಡ ಶಿಕ್ಷಕರು ನನ್ನ ಸಾಹಿತ್ಯದ ಬಗೆಗಿನ ಆಸಕ್ತಿಗೆ ಕಾರಣ.

**ಪ್ರ :ನಿಮ್ಮ ಬರೆಹಗಳಲ್ಲಿ ಸಾಮಾಜಿಕ ಬದ್ಧತೆಯನ್ನು ಗುರುತಿಸಲು ಸಾಧ್ಯವಾಗುತ್ತದೆ, ಐತಿಹಾಸಿಕ ಸಂಗತಿಗಳು ಚಿತ್ರಿತವಾಗಿವೆ. ಇವೆಲ್ಲಕ್ಕಿಂತ ಮುಖ್ಯವಾಗಿ ದಕ್ಷಿಣಕನ್ನಡದ ಪರಿಸರವನ್ನೆ ಇಟ್ಟುಕೊಂಡು, ತುಳು ಸಂಸ್ಕೃತಿಯನ್ನು ಬಹಳಷ್ಟು ಬಳಸಿಕೊಳ್ಳಲು ಪ್ರೇರಣೆ ಏನಾದರು ಇದೆಯೇ?**

ಉ :ಸಾಮಾಜಿಕ ಬದ್ಧತೆಯೇ ನನ್ನ ಬರಹಗಳ ಒಟ್ಟು ಉದ್ದೇಶ. ಏಕೆಂದರೆ ಇಲ್ಲಿ ಬೇರೆ ಬೇರೆ ಜಾತಿ ಧರ್ಮಗಳ ಜನರಿರುವ ಕಾರಣ ಅವರೆಲ್ಲರೂ ಸಹಬಾಳ್ವೆಯಿಂದ ಜೀವನ ನಡೆಸುವುದು ಮುಖ್ಯ. ಆದ್ದರಿಂದ ಜಾತಿವರ್ಗದ ನಡುವಿನ ಸಂಘರ್ಷ ಮತ್ತು ಪ್ರೀತಿಯನ್ನು ಇಟ್ಟುಕೊಂಡು ಕಾದಂಬರಿಯನ್ನು ಬರೆದಿದ್ದೇನೆ. ಆದರೆ ಇಂತಹ ಕಲ್ಪನೆಗಳು ಈಗ ಇಲ್ಲದಿದ್ದರೂ ಈ ಬರೆಹಗಳು ಸ್ವಲ್ಪಮಟ್ಟಿಗಾದರೂ ಜನರ ಮೇಲೆ ಪ್ರಭಾವ ಬೀರಿ ಜಾತಿ ಜಾತಿಗಳ ನಡುವೆ, ಧರ್ಮ ಧರ್ಮಗಳ ನಡುವೆ ಸಂಘರ್ಷವಿರದೆ ಸಾಮರಸ್ಯ ಮೂಡಿಬರಲಿ ಎನ್ನುವುದೇ ನನ್ನ ಉದ್ದೇಶ.

ಆರಂಭದಲ್ಲಿ ನಾನು ಬರೆದ ಎರಡು ಕಾದಂಬರಿಗಳನ್ನು ಓದಿದ ವಿಮರ್ಶಕ ಪ್ರೊ। ಸಿ.ಎನ್. ರಾಮಚಂದ್ರ ಅವರು ನೀವು ಯಾಕೆ ತುಳು ಸಂಸ್ಕೃತಿಯನ್ನು ಬರೆಹಕ್ಕೆ ಆಯ್ಕೆ ಮಾಡಿಕೊಳ್ಳಬಾರದು ಎಂದು ಸಲಹೆ ನೀಡಿದ್ದರಿಂದ ತುಳು ಸಂಸ್ಕೃತಿಯನ್ನೇ ಬರೆಹಕ್ಕೆ ಬಳಸಿಕೊಂಡೆ. ಇಲ್ಲೂ ಕೂಡ ನಾನು ದಕ್ಷಿಣ ಕನ್ನಡದ ಪರಿಸರವನ್ನೇ ಆಯ್ಕೆಮಾಡಿಕೊಂಡಿದ್ದೇನೆ. ಏಕೆಂದರೆ ನಾನು ದಕ್ಷಿಣಕನ್ನಡದವನಾದುದರಿಂದ ನನ್ನ ಇತಿಮಿತಿಯಲ್ಲಿ ತುಳುನಾಡಿನ ಸಂಸ್ಕೃತಿಯಲ್ಲಿ ಯಾವ ಯಾವ ಆಚರಣೆಗಳು, ಕುಣಿತಗಳು, ಆರಾಧನೆಗಳಿವೆ ಎಂಬುದನ್ನು ಕಾದಂಬರಿ ಮೂಲಕ ತಿಳಿಸಬೇಕೆಂಬ ಉತ್ಕಟ ಬಯಕೆ.

**ಪ್ರ ೩ : ಕನ್ನಡ ಸಾಹಿತ್ಯದ ಅಭಿವ್ಯಕ್ತಿ ಮಾಧ್ಯಮಗಳಾಗಿ ಸಣ್ಣ ಕತೆ, ನಾಟಕ, ಕಾದಂಬರಿಗಳಿರುವಾಗಾ ನೀವು ನಿಮ್ಮ ಬರೆಹಕ್ಕೆ ಕಾದಂಬರಿಗಳನ್ನೇಆರಿಸಿಕೊಳ್ಳಲು ಕಾರಣವೇನು?**

ಉ: ಸಾಹಿತ್ಯ ಪ್ರಕಾರದಲ್ಲಿ ಕಾದಂಬರಿ ವಿಶಾಲವಾದ ಮತ್ತು ಜನಪ್ರಿಯ ಪ್ರಕಾರ. ಇಲ್ಲಿ ಒಬ್ಬ ಬರಹಗಾರನಿಗೆ ಹೇಳಿಕೊಳ್ಳಲು ಸಾಕಷ್ಟು ಅವಕಾಶವಿದೆ. ದಕ್ಷಿಣ ಕನ್ನಡದ

ಸಾಂಸ್ಕೃತಿಕ ಪರಿಸರವನ್ನು ಪರಿಚಯಿಸುವುದು ಮತ್ತು ಇತರರಿಗೂ ತಲುಪಿಸುವುದು ನನ್ನ ಆಕಾಂಕ್ಷೆಯಾದುದರಿಂದ ಕಾದಂಬರಿಗೆ ಹೆಚ್ಚಿನ ಗಮನ ನೀಡಿದ್ದೇನೆ. ಕಾಲದ ದೃಷ್ಟಿಯಿಂದಲೇ ದಕ್ಷಿಣ ಕನ್ನಡದ ಸಾಂಸ್ಕೃತಿಕ ಪರಿಸರ ದೀರ್ಘವಾದುದು. ಇಲ್ಲಿಯ ಯಕ್ಷಗಾನ, ಕೋಲ, ನೇಮ, ನಾಗಮಂಡಲ, ಕಂಬುಲ ಇನ್ನಿತರ ಆಚರಣೆ ಹಾಗೂ ಅರಾಧನೆಗಳ ವಿಚಾರಗಳು ಹೊರಗಿನವರಿಗೂ ತಿಳಿಯಲಿ ಎಂಬ ಉದ್ದೇಶದಿಂದ ಕಾದಂಬರಿ ಪ್ರಕಾರವನ್ನು ಆರಿಸಿಕೊಂಡೆ.

**ಪ್ರ ೪ : ಆಧುನಿಕ ದಿನಗಳಲ್ಲಿ ಆಚರಣೆ ಮತ್ತು ನಂಬಿಕೆಗಳು ಯಾವ ರೀತಿ ಇದೆ. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು?**

ಉ: ಇಂದು ಮನುಷ್ಯನ ಬದುಕು ಯಾಂತ್ರೀಕರಣಗೊಂಡಿದೆ. ತನ್ನ ಆರ್ಥಿಕ ಸ್ಥಿತಿಯನ್ನಷ್ಟೇ ವೃದ್ಧಿಗೊಳಿಸುವ ಸಲುವಾಗಿ ಓಡಾಟದ ಸ್ಪರ್ಧೆಗೆ ಇಳಿದಿದ್ದಾನೆ. ಈ ದಿಸೆಯಲ್ಲಿ ಆಚರಣೆ ಮತ್ತು ಆರಾಧನೆಗಳನ್ನು ಶ್ರದ್ಧೆಯಿಂದ ಕೈಗೊಳ್ಳುವುದಿಲ್ಲ. ಕೇವಲ ಶೋಕಿಗಾಗಿ ಇದನ್ನು ಮುಂದುವರಿಸಿಕೊಂಡು ಬಂದಿದ್ದಾನೆ. ಇವತ್ತು ಆಚರಣೆ ಮತ್ತು ಆರಾಧನೆಗಳು ಇಲ್ಲವೆಂದಲ್ಲ; ಆದರೆ ಅದು ಕೇವಲ ತಮ್ಮ ಅಂತಸ್ತನ್ನು ಪ್ರದರ್ಶಿಸುವ ಒಂದು ವಿಚಾರವಾಗಿ ಮಾತ್ರ ಉಳಿದಿದೆ. ಇದನ್ನು ನನ್ನ ಬರಹದ ಬೇರೆ ಬೇರೆ ಸಂದರ್ಭದಲ್ಲಿ ಉಲ್ಲೇಖಿಸಲು ಯತ್ನಿಸಿದ್ದೇನೆ. ಬಹುತೇಕ ನಂಬಿಕೆಗಳು ವಿದ್ಯಾವಂತ ಜನರಲ್ಲಿ ಕಡಿಮೆಯಾಗುತ್ತಿದೆ ಎಂದು ಹೇಳಿದರೆ ತಪ್ಪಾಗಲಾರದು.

**ಪ್ರ ೫ : ನಿಮ್ಮ ಇತರ ಹವ್ಯಾಸಗಳೇನು?**

ಉ:ವ್ಯಕ್ತಿತ್ವ ವಿಕಸನಕ್ಕೆ ಸಂಬಂಧಪಟ್ಟಂತೆ ವಿದ್ಯಾರ್ಥಿಗಳಿಗೆ ಮತ್ತು ಯುವಕರಿಗೆ ತರಬೇತಿ ನೀಡುವುದು, ಯುವ ಸಮುದಾಯವನ್ನು ಸೇರಿಸಿಕೊಂಡು ಶಿಬಿರ, ವಿಚಾರಸಂಕಿರಣಗಳನ್ನು ನಡೆಸುವುದು.

**ಪ್ರ ೬: ಯುವ ಬರಹಗಾರರಿಗೆ ನೀವು ಯಾವರೀತಿ ಪ್ರೇರಣೆಯಾಗಿದ್ದೀರಿ?**

ಉ : ಯುವ ಬರಹಗಾರರನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ನನ್ನ ತಾಯಿಯ ಹೆಸರಿನ ಹೇಮಾವತಿ ಪ್ರಕಾಶನ ಮೂಲಕ ಈಗಾಗಲೇ ನಾಲ್ಕು ಕೃತಿಗಳನ್ನು ಪ್ರಕಟಿಸಿದ್ದೇನೆ. ಮತ್ತು ಯುವವಾಹಿನಿ ಸಂಘಟನೆ ಮೂಲಕ ಪ್ರಭಾಕರ ನೀರ್ ಮಾರ್ಗ ಸಾಹಿತ್ಯ ಪ್ರಶಸ್ತಿಯನ್ನು ಸ್ಥಾಪಿಸಿದ್ದೇನೆ.

**ಪ್ರ ೭ : ಒಬ್ಬ ಬರಹಗಾರನಾಗಬೇಕಾದರೆ ಅವನಲ್ಲಿ ಯಾವ ಅಂಶಗಳಿರಬೇಕು?**

ಉ: ಶ್ರಮಬೇಕು, ಅಧ್ಯಯನಶೀಲತೆ ಅಗತ್ಯ.

## ಪಾರಿಭಾಷಿಕ ಪದಕೋಶ

| ಪದ | ಅರ್ಥ |
|---|---|
| ಅಗೇಲು | = ದೈವಗಳ ಹಾಗೂ ಪಿತೃದೇವತೆಗಳ ಪ್ರೀತಿಗಾಗಿ ಅನ್ನವನ್ನು ಎಲೆಗಳಲ್ಲಿ ಬಡಿಸಿ ಮಾಡುವ ಆಚರಣೆ |
| ಅರದಾಲ ಹಳದಿ | = ಭೂತ ನರ್ತಕ ವೇಷ ಧರಿಸುವಾಗ ಮುಖಕ್ಕೆ ಹಚ್ಚಿಕೊಳ್ಳುವ ಬಣ್ಣ |
| ಅಟ್ಟ | = ಮಾಳಿಗೆ |
| ಕಂಚಿದೀಪಿನಿ | = ಮದುಮಕ್ಕಳಿಗೆ ಮದುವೆಯಂದು ಉಡುಗೊರೆಯಾಗಿ ಬರುವ ಹಣ ಇಡಲು ಮದುಮಕ್ಕಳ ಎದುರುಗಡೆ ಇಡುವ ಕಂಚಿನ ಹರಿವಾಣ |
| ಕನ್ಯಾ | = ತುಳುವಿನ ಒಂದು ತಿಂಗಳು |
| ಕಾಯಿ ಪಗಪುನಿ | = ಮದುವೆಯ ಸಂದರ್ಭದಲ್ಲಿ ಗಂಡು ಹಾಗೂ ಹೆಣ್ಣಿನ ಕಡೆಯವರು ಅಡಿಕೆ ಹಾಗೂ ವೀಳ್ಯವನ್ನು ಪರಸ್ಪರ ಬದಲಿಸಿಕೊಳ್ಳುವುದು |
| ಕಾಯಿ ತಿನ್ಪುನಿ | = ಮದುವೆಯ ಸಂದರ್ಭದಲ್ಲಿ ಪರಸ್ಪರ ಬದಲಿಸಿಕೊಂಡ ವೀಳ್ಯ ಹಾಗೂ ಅಡಿಕೆಯನ್ನು ಅಲ್ಲೆ ತಿನ್ನುವುದು |
| ಜಂಗ | = ಒಲೆಯ ಮೇಲ್ಗಡೆ ಮರದ ಹಲಗೆ ಅಥವಾ ಬಿದಿರು ಮೊದಲಾದ ಸಲಾಕೆಗಳನ್ನಿಟ್ಟು ಜೋಡಿಸಿ ಮಾಡಿದ ಅಟ್ಟಳೆ |
| ತಂಬಿಲ | = ಅಕ್ಕಿ ತೆಂಗಿನಕಾಯಿಯ ಸ್ವಸ್ತಿಕೆ ಇಟ್ಟು ಕಜ್ಜಾಯ ಹಣ್ಣು ವೀಳ್ಯದೆಲೆ ಅಡಕೆ ನೈವೇದ್ಯಗಳನ್ನು ಸಮರ್ಪಿಸಿ ಭೂತ, ನಾಗಗಳಿಗೆ ಮಾಡುವ ಪೂಜಾ ವಿಧಾನ |
| ದುಡಿ | = ಪರಿಶಿಷ್ಟ ಜನಾಂಗದವರು ಬಳಸುವ ಡಮರುವಿನಂತಹ ಚಿಕ್ಕ ಗಾತ್ರದ ಒಂದು ಚರ್ಮವಾದ್ಯ. |
| ಪಗ್ಗು | = ತುಳುವರ ಒಂದು ತಿಂಗಳು |
| ಪಟ್ಲೇರ್ | = ಪಟೇಲ |
| ಪಾಡ್ದನ | = ಭೂತಗಳ ಅಥವಾ ವೀರ ಪುರುಷರ ಪ್ರತಾಪದ ಕವನ ಕಥನ |
| ಪಾರಿ | = ದೈವ ದೇವರುಗಳ ಮುಂದೆ ಪ್ರಾರ್ಥನಾರೂಪದಲ್ಲಿ ಮಾಡುವ ಬಿನ್ನಹ, ಅರಿಕೆ |
| ಬರಿ | = ಕುಲಗೋತ್ರ, ವಂಶ |
| ಬಲ್ಮೆ | = ಬಲಿಮೆ, ಜೋತಿಷ್ಯ, ಶಕುನ |
| ಬೂಳ್ಯ | = ಬೂತದ ಪ್ರಸಾದ ರೂಪದಲ್ಲಿ ಕೊಡುವ ಗಂಧ |
| ಮದಿಪು | = ತೀರ್ಮಾನ ಮಾಡು, ನಿರ್ಣಯ ಕೊಡು |
| ಮುಂಬು | = ಮೂಕ ಪ್ರಾಣಿಗಳು, ಹೆಚ್ಚು ಮಾತಾಡದ ವ್ಯಕ್ತಿ |
| ಸುಗ್ಗಿ | = ಸೌರಮಾನದ ಹನ್ನೆರಡನೆಯ ತಿಂಗಳು, ತುಳುವರ ಒಂದು ತಿಂಗಳು |
| ಸೂಟೆ | = ತೆಂಗಿನ ಒಣಗರಿಗಳನ್ನು ಸೇರಿಸಿ ಮಾಡಿದ ಪಂಜು, ದೀವಟಿಗೆ |

